

ಶ್ರೀಶೇಷಾಚಲಂ ಪ್ರಸನ್ನ

ಶ್ರೀಶೇಷಾಚಲ ಪ್ರೆಸ್ಸು ಗ್ರಂಥಮಾಲೆ,

ಪೋ. ಆನಂದವನ, ಜಿ ಧಾರವಾಡ.

श्री शेषाचल प्रेस व ग्रंथमाला.

पो. आनदवन, जि. धारवाड

SHRI SHESHACHAL PRESS & GRANTHAMALA,

Manager- B. P. KALE Post ANANDVAN, Dist Dharwar


ಪತ್ತೇದಾರ

# ನರಸಿಂಗರಾಯು

(ಒಂದು ಪತ್ತೇದಾರಿ ಕಥೆ)




ಲೇಖಕ: —

ಎಚ್. ಪಿ. ಸೀತಾರಾಮಭಟ್ಟ

ಹೇರಂಭಾಪುರ ತೀರ್ಥಹಳ್ಳಿ.




ಬೆಲೆ ೪ ಆ.

# ನರಸಿಂಗರಾಯ!

[ಒಂದು ಪತ್ತೇದಾರೀ ಕಥೆ.]


ಲೇಖಕ:—

ಎಚ್. ಪಿ. ಸೀತಾರಾಮಭಟ್ಟ,

ಹೇರಂಜಾಪುರ-ತೀರ್ಥಹಳ್ಳಿ.



ಪ್ರಕಾಶಕ:—

ವಾಯ್. ಜಿ. ಕುಲಕರ್ಣಿ,

ಎಡಿಟರ, ಸ. ಚ., ಆನಂದವನ.





೧೯೨೯

ಬೆಲೆ ೪ ಆಣೆ.

MANOHARA GRANTHA BHANDAR

DHARWAR.



# ಮುನ್ನುಡಿ.

ಇದೊಂದು ಪುಟ್ಟ ಡಿಟೆಕ್ಟಿವ್ಹ ನಾವೆಲ್ಲು. ಇದನ್ನು ತಾವು ಸ್ವಂತ ಕಲ್ಪನೆಯಿಂದ ಬರೆದಿರುವೆವೆಂದು ಇದರ ಲೇಖಕರಾದ ಮಿ|| ಎಚ್. ಪಿ. ಸೀತಾರಾಮಭಟ್ಟರವರು ನಮಗೆ ಬರೆದ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಲೇಖಕರು ಕನ್ನಡ ವಾಙ್ಮಯ ಸೇವೆಗೆ ಒಳ್ಳೇ ಹುರುಪುಳ್ಳವರೂ, ಕಲ್ಪಕರೂ ಇದ್ದದರಿಂದ ಇವರ ವಿಜ್ಞಾಪನೆಯ ಮೇರೆಗೆ ಇದರಲ್ಲಿ ಯೋಗ್ಯ ಸುಧಾರಣೆ ಮಾಡಿ ಪ್ರಸಿದ್ಧ ಪಡಿಸಿರುತ್ತದೆ. ಈ ಪುಟ್ಟ ಕಥೆಯು ವಾಚಕರ ಆದರಕ್ಕೆ ಪ್ರಾಪ್ತವಾಗುವದೆಂಬ ಅಂಶವನ್ನು ನಾವು ಬರೆಯುವ ಅವಶ್ಯಕತೆಯೇ ಇಲ್ಲ. ಮಿ|| ಸೀತಾರಾಮಭಟ್ಟರು ತಮ್ಮ ಸಂಕಲ್ಪದಂತೆ ಇನ್ನು ಮುಂದೂ ಕನ್ನಡ ಭಾಷಾಮಾತೆಯ ಸೇವೆಮಾಡಿ ಕೃತಾರ್ಥರಾಗಬೇಕೆಂದು ಹಾರೈಸುವೆವು.

ಸಜ್ಜನ ವಿಧೇಯ,

ಶ್ರೀ ಕ್ಷೇತ್ರ ಆನಂದವನ,<br>ತಾ|| ೨೮-೨-೧೯೨೯ } ರಾ. ತ್ರ್ಯ. ಕರ್ಪೂರ,<br>ಸಬ್ ಎಡಿಟರ, ಸ. ಚ.



ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ
ಇವರಿಂದ ಮುದ್ರಿಸಲ್ಪಟ್ಟಿತು.

# ನರಸಿಂಗರಾಯ

(ಒಂದು ಪತ್ತೇದಾರೀ ಕಥೆ)

## (೧)



ಒಂದು ಯಾವುದೋ ಕೆಲಸದ ನಿಮಿತ್ತವಾಗಿ ಕೃಷ್ಣನಗರದ ಪೋಲೀಸ ಸುಪರಿಂಟೆಂಟಸಾಹೇಬರು ರಾಮಪುರಕ್ಕೆ ಬಂದಿದ್ದರು. ಸಾಯಂಕಾಲ ಆರುಗಂಟೆಯ ಸಮಯ. ಸಾಹೇಬರು ಪೋಲೀಸ ಸ್ಟೇಶನ್ ಮೊದಲಾದವುಗಳ ತನಿಖೆಯನ್ನು ಪೂರೈಸಿಕೊಂಡು ಬಂಗ್ಲೆಗೆ ಬಂದರು. ಕಾಫಿ ಪ್ರಾಶನವಾದನಂತರ ಸಾಹೇಬರು ಖುರ್ಚಿಯ ಮೇಲೆ ಕುಳಿತು, ಮೇಜಿನ ಮೇಲಿಟ್ಟಿದ್ದ ಆ ದಿವಸ ಬಂದ ಟಪಾಲುಗಳನ್ನು ಒಂದೊಂದಾಗಿ ಒಡೆದು ನೋಡಹತ್ತಿದರು. ಹಾಗೆಯೇ ನೋಡುತ್ತಿರುವಲ್ಲಿ ಆ ಪತ್ರಗಳ ಕಟ್ಟಿನಲ್ಲಿದ್ದ ದೊಡ್ಡದಾದ ಒಂದು ಕೆಂಪು ಲಕೋಟೆಯ ಮೇಲೆ ಸಾಹೇಬರ ದೃಷ್ಟಿಯು ಬಿದ್ದಿತು. ಕೂಡಲೇ ಅವರು ಅದನ್ನು ಆತುರತೆಯಿಂದ ಒಡೆದು ಓದತೊಡಗಿದರು.

ಪತ್ರವನ್ನು ಓದಿದಂತೆಲ್ಲಾ ಸಾಹೇಬರ ಮುಖವು ಆಶ್ಚರ್ಯದಿಂದಲೂ, ಗಾಬರಿಯಿಂದಲೂ ಬದಲಾವಣೆ ಹೊಂದಿತು. ಸಾಹೇಬರು ಪತ್ರವನ್ನೊಮ್ಮೆ ಪೂರ್ಣವಾಗಿ ಓದಿ ಹಾಗೆಯೇ ಅದನ್ನು ಮೇಜಿನ ಮೇಲಿರಿಸಿ ಯೋಚಿಸ ತೊಡಗಿದರು.

"ಆಹಾ! ಎಂತಹ ಧೀರತನವು! ಕಳ್ಳರು ಸಾಮಾನ್ಯರಲ್ಲವೆಂದು ತೋರುತ್ತದೆ. ತಾವು ಕಳವು ಮಾಡುವದನ್ನು ಕುರಿತು ನನಗೇ ಪತ್ರಬರೆಯ ಬೇಕಾದರೆ ಅವರ ಧೈರ್ಯವೆಷ್ಟಿರಬೇಕು? ಕಳ್ಳರು ಈ ದಿನ ನಿಶ್ಚಯವಾಗಿಯೂ ಗುರುನಾಥರಾಯರ ಹಣವನ್ನು ಹರಣಮಾಡಿಕೊಂಡು ಹೋಗುವರು! ಇದು ಖಂಡಿತ! ಈ ವಿಷಯವು ನಮಗೆ ತಿಳಿದೂ ನಾವು ತಟಸ್ಥರಾಗಿರುವದು ಒಳ್ಳೆಯದಲ್ಲ! ನಮ್ಮ ಕೈಲಾದಷ್ಟು ಪ್ರಯತ್ನವನ್ನು ಮಾಡಬೇಕು. ಈ ಪ್ರಾಂತದಲ್ಲಿ ಕೆಲ ಜನ

ಚೋರರು ಸೊಕ್ಕಿಗೆ ಬಂದ ಹಾಗೆ ತೋರುತ್ತದೆ. ಅವರ ಸೊಕ್ಕನ್ನು ಬೊಕ್ಕ ಬೋರಲು ಹಾಕಲೇಬೇಕು.

ಹೀಗೆಂದು ಸಾಹೇಬರು ಒಬ್ಬ ಜವಾನನನ್ನು ಕರೆದು ಎಲೋ! ಈ ಕೂಡಲೆ ಪೋಲೀಸ ಸ್ಟೇಶನ್ನಿಗೆ ಹೋಗಿ ಮೋಟಾರುಕಾರನ್ನು ಬಾಡಿಗೆ ತೆಗೆದು ಕೊಂಡು ನಾಲ್ಕು ಮಂದಿ ಪೋಲೀಸ ಜವಾನರನ್ನು ಕರೆದುಕೊಂಡು ರಾತ್ರಿ ೯ ಘಂಟೆಯೊಳಗಾಗಿ ಸೋಮಪುರದ ಗುರುನಾಥರಾಯರ ಮನೆಗೆ ಹೋಗಬೇಕೆಂದು ಪೋಲೀಸ ಇನಸ್ಪೇಕ್ಟರರಿಗೆ ಹೇಳು. ಈ ದಿನ ಅವರ ಮನೆಯಲ್ಲೊಂದು ದರೋಡೆಯು ನಡೆಯುವ ಸಂಭವವಿದೆ; ಆದುದರಿಂದ ಆದಷ್ಟು ಜಾಗ್ರತೆ ಹೋಗ ಹೇಳು, ಎಂದು ಅಪ್ಪಣೆ ಮಾಡಿದರು. ಜವಾನನು ಅಪ್ಪಣೆಯೆಂದು ತಕ್ಷಣವೇ ಪೋಲೀಸ ಸ್ಟೇಶನ್ನಿಗೆ ಹೊರಟು ಹೋದನು.

ಪ್ರಿಯವಾಚಕರೇ, ನೀವು ಸುಪಂಂಡೆಂಟ ಸಾಹೇಬರಿಗೆ ಬಂದ ಪತ್ರವನ್ನು ಓದಲು ಆತುರರಾಗಿರುವಿರಲ್ಲವೇ? ಇದೋ, ಆ ಪತ್ರದ ಅಭಿಪ್ರಾಯವನ್ನು ತಮಗಾಗಿ ಇಲ್ಲಿ ಕೊಟ್ಟಿರುವೆವು.

—ಪತ್ರ—

ಸುಪರಿಂಡೆಂಟಸಾಹೇಬರೇ:—

ನಿಮ್ಮ ಪೋಲೀಸ ಖಾತೆಯು ಶಾಂತಿ ರಕ್ಷಣೆಗಾಗಿಯೂ, ದುಷ್ಟರನ್ನು ದಂಡಿಸುವದಕ್ಕಾಗಿಯೂ ಪ್ರಜೆಗಳ ಸಹಾಯಕ್ಕಾಗಿ ಸರಕಾರದವರಿಂದ ನೇಮಿಸಲ್ಪಟ್ಟುದಲ್ಲವೇ? ನೀವು ಯಾವ ಬಗೆಯಿಂದ ಪ್ರಜೆಗಳಿಗೆ ಉಪಕಾರ ಮಾಡುವಿರೋ ನಮಗೆ ತಿಳಿಯದು! ನೀವು ನಿಜವಾಗಿಯೂ ಶಾಂತಿ ರಕ್ಷಕರಾಗಿದ್ದರೆ, ಪ್ರಜೆಗಳ ಆಪತ್ಪರಿಹಾರಕರಾಗಿದ್ದರೆ ಇದೋ! ಈ ದಿವಸ ರಾತ್ರಿ ೯ ಘಂಟೆಗೆ ನಾವು ಸೋಮಪುರದ ಪ್ರಖ್ಯಾತ ಶ್ರೀಮಂತ ಗುರುನಾಥರಾಯರ ಧನವನ್ನು ಅಪಹರಿಸುವೆವು! ನೀವು ನಮ್ಮನ್ನು ಹಿಡಿದರೆ ಮಾತ್ರ ನಿಮ್ಮ ಸಾಹಸವನ್ನು ಒಪ್ಪಿಕೊಳ್ಳುವೆವು.

ಕಳ್ಳರ ಗುಂಪಿನ ಹಿರಿಯ.

---

( ೨ )

ಕೃಷ್ಣ ಪಕ್ಷದ ಗಾಢಾಂಧಕಾರವು ಎಲ್ಲೆಡೆಯಲ್ಲಿಯೂ ಕವಿದಿತ್ತು. ಸಾಲದುದಕ್ಕೆ ಆಕಾಶದಲ್ಲೆಲ್ಲಾ ಕಾರ್ಮುಗಿಲು ಕವಿದಿತ್ತು. ಸುಮಾರು ೮|| ಘಂಟೆಯ

ಸಮಯವಿರಬಹುದು. ರಾಮಪುರದಿಂದ ಸೋಮಪುರಕ್ಕೆ ಹೋಗುವ ಮಾರ್ಗ
ದಲ್ಲೆಲ್ಲಿಯೂ ನಿರ್ಜನ, ನಿರವ. ಇಂತಹ ಸಮಯದಲ್ಲಿ ಆ ಮಾರ್ಗದ ಮಧ್ಯ
ಕಾಡಿನಲ್ಲಿ ಒಂದು ಮೋಟಾರ ಬಂಡಿಯು ವೇಗದಿಂದ ಸೋಮಪುರದ ಕಡೆಗೆ
ಹೋಗುತ್ತಿತ್ತು. ಮೋಟಾರಿನ ನಾಲ್ಕು ಬದಿಯೂ ಪರದೆಯಿಂದ ಮುಚ್ಚ
ಲ್ಪಟ್ಟುದರಿಂದಲೂ, ಗಾಢಾಂಧಕಾರದಿಂದಲೂ ಅದರೊಳಗೆ ಯಾರಿರುವರೆಂಬುದು
ಕಾಣುತ್ತಿರಲಿಲ್ಲ.

ಮೋಟಾರುಬಂಡಿಯು ನೆಟ್ಟಗೆ ಸೋಮಪುರದ ಶ್ರೀಮಂತ ಗುರುನಾಥ
ರಾಯನ ಮನೆಯ ಅಂಗಳಕ್ಕೆ ಬಂದು ನಿಂತಿತು. ಗುರುನಾಥರಾಯನು ಅದೇ ತಾನೆ
ಊಟಮಾಡಿ ಮನೆಯ ಮುಂದಿನ ಅಂಗಳದಲ್ಲಿ ಒಬ್ಬನೇ ತಿರುಗಾಡುತ್ತಿದ್ದನು.
ಆತನು ಯಾರ ದಾರಿಯನ್ನೋ ಕಾಯುತ್ತಿದ್ದಂತೆ ತೋರುತ್ತಿತ್ತು. ಮೋಟಾರು
ಬಂದೊಡನೆ ಅವನು ಉತ್ಸುಕತೆಯಿಂದ ಅದರ ಬಳಿಗೆ ಹೋಗಿ ಬಂದವರು
ಯಾರು? ಎಂದು ಕೇಳಿದನು. ಗುರುನಾಥರಾಯನ ಪ್ರಶ್ನೆಗೆ ಜವಾಬುಕೊಡದೆ
ದೀರ್ಘಕಾಯದ ವ್ಯಕ್ತಿಗಳಿಬ್ಬರು ಮೋಟಾರಿನಿಂದ ಕೆಳಗಿಳಿದು ಆತನ ಕೈಯನ್ನು
ಹಿಡಿದುಕೊಂಡು ನೆಟ್ಟಗೆ ಅವನು ಕೂಡ್ರುವ ಕೋಣೆಗೆ ಹೋದರು. ಗುರುನಾಥ
ರಾಯನಿಗೆ ಪರಮಾಶ್ಚರ್ಯವಾಯಿತು. ಆಶ್ಚರ್ಯಭರದಿಂದ ಆ ವ್ಯಕ್ತಿಗಳನ್ನು
ಮರುಮಾತಾಡಿಸದೆ, ಅವರು ಕೈಹಿಡಿದ ಹಾಗೆಯೇ ತನ್ನ ಕೊಠಡಿಗೆ ಹೋದನು.
ವ್ಯಕ್ತಿಗಳಿಬ್ಬರೂ ಸಂಪೂರ್ಣ ಕರೀ ಡ್ರೆಸ್ಸಿನಿಂದ ಮಂಡಿತರಾಗಿದ್ದರು. ಇಬ್ಬರೂ
ದೀರ್ಘಕಾಯರು, ಇಬ್ಬರಿಗೂ ಕಲ್ಲಿಯ ಮೀಸೆ ಅವರ ಈ ವೇಷ-ಭೂಷಣಗ
ಳನ್ನು ನೋಡಿದೊಡನೆಯೇ ಗುರುನಾಥರಾಯನಿಗೆ ಸಂಶಯಬಂದಿತು. ಎಲಾ!
ಇದೇನು? ಇವರಾರು? ಮಾತನಾಡಿಸಿದರೆ ಮಾತನಾಡದೆ ಚಿರಪರಿಚಿತರಂತೆ
ನೆಟ್ಟಗೆ ಒಳಗೇ ಬಂದರಲ್ಲ! ಇವರ ವೇಷ-ಭೂಷಣಗಳನ್ನು ನೋಡಿದರೆ ವಿಚಿತ್ರ
ವೆನಿಸುತ್ತದೆ. ಆಗ ಪತ್ರ ಬರೆದವರು ಇವರೇ ಆಗಿರಬಹುದೇ? ಎಂದುಕೊಂಡು
ಆ ವ್ಯಕ್ತಿಗಳನ್ನು ಕುರಿತು:——ಅಯ್ಯಾ! ತಾವು ಯಾರು? ಯಾವ ಉದ್ದೇಶದಿಂದ
ಬಂದಿರುವಿರಿ? ಎಂದನು. ವ್ಯಕ್ತಿಗಳಿಬ್ಬರೂ ಇದುವರೆಗೂ ಆ ಕೊಠಡಿಯೊಳಗಿದ್ದ
ಎಲ್ಲಾ ಪದಾರ್ಥಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡುತ್ತಿದ್ದರು. ಗುರುನಾಥ
ರಾಯನ ಪ್ರಶ್ನೆಗೆ ಅವರಲ್ಲೊಬ್ಬನು ಹಾಸ್ಯಮುಖದಿಂದ:——ರಾಯರೇ, ನಿಮಗೆ
ಈ ದಿನ ಬೆಳಿಗ್ಗೆ ಪತ್ರಬರೆದವರು ನಾವೇ! ಅದರಲ್ಲಿ ಸಾಯಂಕಾಲ ನಾವು ಒರು
ತ್ತೇವೆಂದು ಬರೆದಿದ್ದೆವಲ್ಲವೇ? ಅದರಂತೆಯೇ ಈಗ ಬಂದಿರುವೆವು. ನಾವು ಬಂದ

ಉದ್ದೇಶವಿನ್ನೂ ನಿಮಗೆ ಗೊತ್ತಾಗಲಿಲ್ಲವೆಂಬಂತೆ ತೋರುತ್ತಿದೆ, ಎಂದನು.

ಗುರುನಾಥರಾಯ:—ಬೆಳಿಗ್ಗೆ ಪತ್ರ ಬರೆದವರು ನೀವೇಯೋ? ತಾವು ಬಂದ ಉದ್ದೇಶವನ್ನು ನಾನರಿಯೆನು, ದಯವಿಟ್ಟು ತಿಳಿಸುವಿರಾ?

ವ್ಯಕ್ತಿ:—ರಾಯರೇ, ನೀವು ಶ್ರೀಮಂತರು! ನಾವು ಬಡವರು. ನಿಮ್ಮ ಶ್ರೀಮಂತಿಕೆಯನ್ನು ನೋಡಿ, ನಮ್ಮ ಹೊಟ್ಟೆಯು ಉರಿಯ ತೊಡಗಿದೆ. ಆದುದರಿಂದ ಇಂದು ನಿಮ್ಮ ದ್ರವ್ಯವನ್ನು ಹರಣಮಾಡಬೇಕೆಂದು ಬಂದಿರುವೆವು.

ವ್ಯಕ್ತಿಯ ಮಾತನ್ನು ಕೇಳಿ, ಗುರುನಾಥರಾಯನಿಗೆ ನಿಜ ಸಂಗತಿಯು ಹೊಳೆಯಿತು. ಆತನು ಗಾಬರಿಯಾದನು. ಎದೆಯು ಧಸ್ಸೆಂದಿತು. ತನ್ನ ಕೊರಳಿಗೆ ತಾನೇ ಉರುಲನ್ನು ಹಾಕಿಕೊಂಡಂತಾಯಿತೆಂದನು. ಆದರೂ ಧೈರ್ಯ ತಾಳಿ:—

ಏನು! ನೀವು ನನ್ನ ಧನವನ್ನು ಅಪಹರಿಸಲು ಬಂದಿರುವಿರಾ? ನಿಮ್ಮ ಮೈಮೇಲೆ ಸ್ವಲ್ಪವೂ ಎಚ್ಚರವಿಲ್ಲೆಂಬಂತೆ ಕಾಣುತ್ತದೆ. ಈಗ ನೀವೆಲ್ಲಿರುವಿರಿ? ಯಾರ ಬಳಿಯಲ್ಲಿರುವಿರಿ? ಎಂಬುದರ ಅರಿವು ನಿಮಗಿದೆಯೋ? ಈಗಲೇ ನಿಮ್ಮನ್ನು ಹೆಡಮುರುಗೆ ಬಿಗಿಸುವೆನು............

ಗುರುನಾಥರಾಯನು ಇನ್ನೂ ಏನೇನೋ ಮಾತನಾಡತಕ್ಕವನಿದ್ದನು. ಅಷ್ಟರಲ್ಲಿ ಆಗಂತುಕ ವ್ಯಕ್ತಿಗಳಲ್ಲೊಬ್ಬನು ಛಕ್ಕನೆ ಗುರುನಾಥರಾಯನ ಮೈಮೇಲೆ ಹಾರಿ ಅವನನ್ನು ನೆಲಕ್ಕೆ ಕೆಡವಿ ಒಂದು ಕೈಯಿಂದ ಆತನ ಬಾಯನ್ನೂ, ಮತ್ತೊಂದು ಕೈಯಿಂದ ಆತನ ನಡುವನ್ನೂ ಬಲವಾಗಿ ಹಿಡಿದು, ವಿಕಟಹಾಸ್ಯ ಮಾಡಿ ನಗುತ್ತ:—ಎಲಾ! ರಾಯಾ, ನಮಗೆ ಮೈಮೇಲೆ ಎಚ್ಚರ ವಿದೆ. ನಾವೇನೂ ಹುಂಬರಲ್ಲ. ನಿನ್ನಂತಹ ನೂರಾರು ಮಂದಿ ಶ್ರೀಮಂತರನ್ನು ತಲೆಕೆಳಗು ಮಾಡಬಲ್ಲೆವು. ನಿನ್ನ ಗೊಡ್ಡು ಬೆದರಿಕೆಗೆ ಬೆದರುವವರು ನಾವಲ್ಲ. ಯಾರನ್ನು ಕರೆಯುವಿ? ಕರೆ! ಎನ್ನುತ್ತ ವಿನೋದಕ್ಕಾಗಿ ರಾಯನನ್ನು ಅತ್ತಿಂದಿತ್ತ ಹೊರಳಾಡಿಸುತ್ತಿದ್ದನು.

ಮತ್ತೊಬ್ಬನು ಗುರುನಾಥರಾಯನ ಸೊಂಟದಲ್ಲಿದ್ದ ಬೀಗದ ಕೈ-ಗೊಂಚಲನ್ನು ತೆಗೆದುಕೊಂಡು ಆತನ ಕಬ್ಬಿಣದ ಪೆಟ್ಟಿಗೆಯ ಬೀಗವನ್ನು ತೆರೆದು, ಅದರಲ್ಲಿದ್ದ ನೋಟಿನ ಕಟ್ಟುಗಳನ್ನೂ, ಒಂದು ಪುಸ್ತಕವನ್ನೂ ತೆಗೆದುಕೊಂಡು ಆ ಮೇಲೆ ಇಬ್ಬರೂ ಸೇರಿ ಗುರುರಾಥರಾಯನ ಕೈ-ಕಾಲುಗಳನ್ನು ಕಟ್ಟಿ

ಬಾಯಿಗೆ ಬಟ್ಟೆಯನ್ನು ಬಿಗಿದು ಆ ಕೋಣೆಯಲ್ಲಿಯೇ ಆತನನ್ನು ಚಲ್ಲಿಕೊಟ್ಟು ಹೊರಗೆ ಬಂದು ಮೋಟಾರು ಹತ್ತಿ ಆ ಅಂಧಕಾರದಲ್ಲಿ ಮಾಯವಾದರು!

---

## ( ೨ )

ಕಳ್ಳರು ಹೊರಟು ಹೋಗಿ ಅದೇ ಹತ್ತು ನಿಮಿಷಗಳಾಗಿರಬಹುದು. ಅಷ್ಟರಲ್ಲಿ ಮತ್ತೊಂದು ಮೋಟಾರು ಬಂಡಿಯು ಗುರುನಾಥರಾಯನ ಮನೆಯ ಬಾಗಿಲಿಗೆ ಬಂದಿತು. ಅದರೊಳಗಿಂದ ನಾಲ್ವರು ಪೋಲೀಸಿನವರೂ, ರಾಮಪುರದ ಪೋಲೀಸ ಇನ್‌ಸ್ಪೆಕ್ಟರನೂ, ಡ್ರೈವರನೂ ಕೆಳಗಿಳಿದರು. ಗುರುನಾಥರಾಯನು ಊಟಮಾಡಿ ಹೊರಗೆ ಹೋಗಿ ಒಂದು ಘಂಟೆಯಾದರೂ ಒಳಗೆ ಮಲಗಲಿಕ್ಕೆ ಬಾರದೆ ಇರುವದನ್ನೂ, ಈಗ ತಾನೆ ಮೋಟಾರು ಬಂಡಿಯೊಂದು ಬಂದು ಹೋದುದರ ಶಬ್ದವು ಕೇಳಿ, ಪುನಃ ಮೋಟಾರು ಬಂದ ಶಬ್ದವನ್ನು ಕೇಳಿಯೂ ಒಬ್ಬ ಸೇವಕನು ನೋಡುವದಕ್ಕಾಗಿ ಹೊರಗೆ ಬಂದನು. ಆತನು ಮೋಟಾರಿನಿಂದಿಳಿದ ಪೋಲೀಸಿನವರನ್ನು ನೋಡಿ ಗಾಬರಿಯಿಂದ ಅವರಿಗೆ ಸಲಾಂ ಮಾಡಿದನು. ಇನ್‌ಸ್ಪೆಕ್ಟರನು ಆ ಸೇವಕನನ್ನು ಕುರಿತು:—ಎಲಾ, ರಾಯರು ಮನೆಯಲ್ಲಿರುವರೇನಯ್ಯಾ? ಎಂದು ಆತುರತೆಯಿಂದ ಕೇಳಿದನು.

ಸೇವಕ (ವಿನಯದಿಂದ):—ಇದ್ದಾರೆ ಸ್ವಾಮೀ! ಆಗಲೇ ಹೊರಗೆ ಬಂದಿದ್ದರು. ಆಫೀಸಕೋಣೆಯಲ್ಲಿರಬಹುದು, ಎಂದು ಆಫೀಸ ಕೋಣೆಯ ಕಡೆಗೆ ಹೊರಟನು. ಅವನ ಹಿಂದೆಯೇ ಇನ್‌ಸ್ಪೆಕ್ಟರನೂ, ಪೋಲೀಸಿನವರೂ ಹೋದರು. ಎಲ್ಲರೂ ಕೋಣೆಯ ಒಳಕ್ಕೆ ಹೋದರು. ಅಲ್ಲಿ ನೋಡುತ್ತಾರೆ. ಒಂದು ಕಡೆಯಲ್ಲಿ ಗುರುನಾಥರಾಯನು ಮೂರ್ಛೆ ಹೊಂದಿ ಬಿದ್ದಿದ್ದನು. ಆತನ ಕೈಕಾಲುಗಳು ಬಿಗಿಯಲ್ಪಟ್ಟಿದ್ದವು. ಕಬ್ಬಿಣದ ಪೆಟ್ಟಿಗೆಯ ಬಾಗಿಲು ತೆರೆಯಲ್ಪಟ್ಟಿತ್ತು. ಈ ವಿಚಿತ್ರ ದೃಶ್ಯವನ್ನು ನೋಡಿ ಇನ್‌ಸ್ಪೆಕ್ಟರನಿಗೂ ಉಳಿದವರಿಗೂ ಸೋಜಿಗವೂ, ಖೇದವೂ ಉಂಟಾದವು. ಸೇವಕನಂತೂ ತನ್ನ ಒಡೆಯನ ಸ್ಥಿತಿಯನ್ನು ನೋಡಿದೊಡನೆಯೇ ಭಯಗೊಂಡು ಹಾಹಾ ಕೂಗಿ ಕುಳಿತನು.

ಇನ್‌ಸ್ಪೆಕ್ಟರನು ತನ್ನ ಕಡೆಯವರನ್ನು ಕುರಿತು, ಕಾರ್ಯವು ಮಿಂಚಿ ಹೋಗಿದೆ, ಎಂದು ಹೇಳಿ ನೀರು ತರುವಂತೆ ಆ ಸೇವಕನನ್ನು ಕಳಿಸಿ ಗುರುನಾಥರಾಯನ ಕೈಕಾಲುಗಳನ್ನು ಬಿಚ್ಚಿ ಆತನ ಬಾಯಿಗೆ ಬಿಗಿದ ಬಟ್ಟೆಯನ್ನು ತೆಗೆದು ಹಾಕಿದನು. ಅಷ್ಟರಲ್ಲಿ ಸೇವಕನು ನೀರು ತರಲು ಒಂದು ಚಿಕ್ಕ ಬಟ್ಟಲನ್ನು

ನೀರಲ್ಲಿ ಅದ್ದಿ ಅದನ್ನು ಗುರುನಾಥರಾಯನ ನೆತ್ತಿಯ ಮೇಲಿಟ್ಟು ಒತ್ತುತ್ತಾ ಬಂದನು ಸ್ವಲ್ಪ ಹೊತ್ತಿನ ಮೇಲೆ ಗುರುನಾಥರಾಯನು ಎಚ್ಚತ್ತು ಮೆಲ್ಲಗೆ ಕಣ್ಣು ತೆರೆದು:—ಅಯ್ಯೋ, ನನ್ನ ಹಣವನ್ನೆಲ್ಲಾ ನೀಚರು ಹೊತ್ತುಕೊಂಡು ಹೋಗುವರಲ್ಲಾ, ಎಂದು ಗಟ್ಟಿಯಾಗಿ ಚೀರಿದನು. ಸ್ವಲ್ಪ ಹೊತ್ತಿನಲ್ಲಿ ಆತನು ಚನ್ನಾಗಿ ಶುದ್ಧಿಯ ಮೇಲೆ ಒಂದು ತನ್ನ ಮುಂದಿರುವ ಇನ್‌ಸ್ಪೆಕ್ಟರನನ್ನು ನೋಡಿ ಆಶ್ಚರ್ಯದಿಂದ:—ಸ್ವಾಮಿಾ, ತಾವು ಯಾವಾಗ ಬಂದಿರಿ? ತಾವು ಈಗ ಒಂದೂವರೆ ಗಂಟೆ ಮುಂಚೆಯೇ ಬಂದಿದ್ದರೆ ನನಗೆ ಎಷ್ಟೋ ಒಳಿತಾಗುತ್ತಿತ್ತು. ನೀಚರಿಬ್ಬರು ನನ್ನನ್ನು ಮೋಸಗೊಳಿಸಿ ನನ್ನ ಹಣವನ್ನೆಲ್ಲಾ ಅಪಹರಿಸಿ ಕೊಂಡೊಯ್ದರು.

ಇನ್‌ಸ್ಪೆಕ್ಟರ:—ರಾಯರೇ, ನಾವೂ ನಿಮ್ಮ ಸಹಾಯಾರ್ಥವಾಗಿಯೇ ಹೊರಟಿದ್ದೆವು; ಆದರೆ ಆ ನೀಚರ ಕುತಂತ್ರದಿಂದ ನಾವಿಲ್ಲಿಗೆ ಬರಲು ಇಷ್ಟು ಸಾವಕಾಶವಾಯಿತು. ನಾವು ಬರುವದರೊಳಗೇ ಆ ನೀಚರು ತಮ್ಮ ಕೆಲಸವನ್ನು ಸಾಧಿಸಿಕೊಂಡು ಓಡಿರುವರು.

ಗುರುನಾಥರಾಯ:—ಕಳ್ಳರು ಸಾಮಾನ್ಯರಲ್ಲ; ಬಹು ಚತುರರು. ನನ್ನನ್ನು ಬಹು ಚಮತ್ಕಾರದಿಂದ ವಂಚಿಸಿದರು. ಇನ್‌ಸ್ಪೆಕ್ಟರರೇ, ಆ ನೀಚರು ನಿಮಗೇನು ತೊಂದರೆಯನ್ನುಂಟುಮಾಡಿದರು?

ಇನ್‌ಸ್ಪೆಕ್ಟರ:—ರಾಯರೇ, ಇಂದು ನಮ್ಮ ಸುಪರಿಂಟೆಂಡೆಂಟ ಸಾಹೇಬರು ಸ್ಟೇಷನ್ ತನಿಖೆಗಾಗಿ ಬಂದಿದ್ದರು. ಅವರಿಗೆ ಸಾಯಂಕಾಲ ಒಂದು ಪತ್ರವು ಬಂದಿತು. ಅದರಲ್ಲಿ ಈ ದಿನ ರಾತ್ರಿ ೯ ಘಂಟೆಗೆ ಗುರುನಾಥರಾಯರಲ್ಲಿ ದರೋಡೆ ಮಾಡುವೆವೆಂದೂ, ಪೋಲೀಸಿನವರು ತಮ್ಮ ಸಾಹಸವನ್ನು ತೋರಿಸಬೇಕೆಂದೂ ಬರೆದಿದ್ದರು. ಆ ಕ್ಷಣವೇ ಸಾಹೇಬರು ನನಗೆ ನಾಲ್ಕು ಜನ ಪೋಲೀಸಿನವರನ್ನು ಕರೆದುಕೊಂಡು, ನಡೆದು ಹೋಗುವಷ್ಟು ವೇಳೆಯು ಸಿಕ್ಕುವದಿಲ್ಲವಾದುದರಿಂದ ಮೋಟಾರು ಬಂಡಿಯಲ್ಲಿ ಹೋಗುವಂತೆ ಅಪ್ಪಣೆ ಮಾಡಿದರು. ನಾನು ಮೋಟಾರನ್ನು ಗೊತ್ತುಮಾಡಿಕೊಂಡು ಹೊರಡುವದಕ್ಕೆ ರಾತ್ರಿ ಎಂಟು ಗಂಟೆಯಾಯಿತು. ಅಲ್ಲಿಂದ ಹೊರಟು ಬರುವಾಗ ಆ ನೀಚರು ಕಾಡಿನಲ್ಲಿ ನಡು ದಾರಿಯ ಮೇಲೊಂದು ದೊಡ್ಡ ಮರವನ್ನು ದಾರಿಗಡ್ಡಲಾಗಿ ಉರುಳಿಸಿದ್ದರು. ಅದನ್ನು ತೆಗೆದು ದಾರಿಯನ್ನು ಬಿಡಿಸಿಕೊಂಡು ಹೊರಡುವಾಗ ಸುಮಾರು ೯ ಗಂಟೆಯಾಗಿರಬಹುದು. ಅಲ್ಲಿಂದ ಮುಂದೆ ಒಂದೆಡೆಯಲ್ಲಿ ದಾರಿಗೆ ಅಡ್ಡಲಾಗಿ

ರಸ್ತೆಯ ಮೇಲೆ ಮುಳ್ಳುಗಳನ್ನು ತಂದು ಹಾಕಿದ್ದರು. ಅವುಗಳಲ್ಲಿ ಯಾವುದೋ ಒಂದು ಬಲವಾದ ಮುಳ್ಳು ಚುಚ್ಚಿ, ಮೋಟಾರ ಗಾಲಿಯು ತೂತಾಗಿ ನಿಂತು ಬಿಟ್ಟಿತು. ಅದನ್ನು ದುರಸ್ತ ಮಾಡಲು ಬಹು ಹೊತ್ತು ಹಿಡಿಯಿತು. ಹೀಗಾಗಿ ಇಲ್ಲಿಗೆ ಬರಲು ಇಷ್ಟು ಹೊತ್ತಾಯಿತು. ಕಳ್ಳರು ಬಹು ಧೂರ್ತರಿರುವರು. ನಿಮ್ಮನ್ನು ಅವರು ಯಾವ ರೀತಿ ವಂಚಿಸಿದರು? ಎಷ್ಟು ಕಳವಾಯಿತು?

ಗುರುನಾಥರಾಯ:—ನನಗೆ ಇಂದು ೨೪ ಘಂಟೆಯ ಸಮಯದಲ್ಲಿ ಒಂದು ಪತ್ರ ಬಂದಿತು. ಅದರಲ್ಲಿ ಇಷ್ಟೇ ಬರೆದಿತ್ತು "ರಾಯರೇ, ಈ ದಿನ ರಾತ್ರಿ ೯ ಘಂಟೆಗೆ ನಿಮ್ಮ ಭೆಟ್ಟಿಗೆ ಬರುವೆವು. ತಾವು ಕಾದಿರುವುದು. ಇತಿ ನಿಮ್ಮ ಮಿತ್ರರು" ಪತ್ರದಲ್ಲಿ ಹೆಸರುದೆಸೆಗಳೇನೂ ಇರಲಿಲ್ಲ. ನಾನು ಯಾರೋ ದೊಡ್ಡ ಮನುಷ್ಯರಿರಬಹುದೆಂದು ತಿಳಿದು ರಾತ್ರಿ ಊಟವಾದೊಡನೆಯೇ ಹೊರಗೆ ಬಂದು ಕಾದಿದ್ದೆನು. ಸುಮಾರು ಒಂಭತ್ತು ಘಂಟೆಯಿರಬಹುದು, ಅಷ್ಟೊತ್ತಿಗೆ ಒಂದು ಮೋಟಾರು ಬಂದಿತು. ಅದರೊಳಗಿಂದ ಇಬ್ಬರು ಬಲಿಷ್ಠ ವ್ಯಕ್ತಿಗಳು ಇಳಿದು ಬಂದವು........

ಮುಂದೆ ಹೀಗೆ ಹೀಗೆ ಅನರ್ಥವು ನಡೆಯಿತು, ಎಂದು ಗುರುನಾಥ ರಾಯನು ಇನಸ್ಪೇಕ್ಟರನಿಗೆ ಹೇಳಿದನು. ಕಳ್ಳರು ಕೈ-ಕಾಲು ಕಟ್ಟಿ ಬಾಯಿಗೆ ಬಟ್ಟೆಯನ್ನು ಬಿಗಿದೊಡನೆಯೇ ತಾನು ಮೂರ್ಛೆ ಹೋದುದರಿಂದ ಮುಂದೇ ನಾಯಿತೆಂಬದೂ, ಕಳ್ಳರು ಎತ್ತ ಹೋದರೆಂಬದೂ ಗೊತ್ತಾಗಲಿಲ್ಲವೆಂದು ಹೇಳಿ ದನು. ಒಳಿಕ ಕಬ್ಬಿಣದ ಪೆಟ್ಟಿಗೆಯ ಒಳಗೆ ಹೋಗಿ ನೋಡಲು, ಪೆಟ್ಟಿಗೆಯು ಬರಿದಾಗಿದ್ದಿತು. ಗುರುನಾಥರಾಯನು (ದುಃಖದಿಂದ):—ಐದೈದು ಸಾವಿರದ ನೋಟುಗಳ ಎರಡು ಕಟ್ಟುಗಳನ್ನಿಟ್ಟಿದ್ದೆನು. ಅವೆರಡನ್ನೂ ತೆಗೆದುಕೊಂಡು ಹೋಗಿರುವರು. ನೋಟಿನ ನಂಬರಿನ ಪುಸ್ತಕವನ್ನೂ ಕದ್ದೊಯ್ದಿರುವರು. ಹತ್ತು ಸಾವಿರ ರೂಪಾಯಿಗಳು ಕಳವಾಗಿ ಹೋಗಿರುವವು.

---

( ೪ )

ಹಿಂದಿನ ಪರಿಚ್ಛೇದಗಳಲ್ಲಿ ವಿವರಿಸಿದ ಘಟನೆಯು ನಡೆದು ಎಂಟು ದಿನ ಗಳಾದವು. ಸುಪರಿಂಡೆಂಟ ಸಾಹೇಬರು ರಾಮಪುರದಲ್ಲಿಯೇ ಇದ್ದರು. ಕಳ್ಳರ ಶೋಧವಿನ್ನೂ ಆಗಿರಲಿಲ್ಲ. ದಿನಾಲು ಪೋಲೀಸಿನವರು ಸೋಮಪುರದ ಹತ್ತಿರ ವಿರುವ ಸುತ್ತಮುತ್ತಲಿನ ಹಳ್ಳಿಗಳಿಗೆ ಹೋಗಿ ಅಲ್ಲಿಯ ಜನರನ್ನು ಬೆದರಿಸುತ್ತಿದ್ದರು;

ಆದರೆ ಅದರಿಂದ ಆವ ಪ್ರಯೋಜನವೂ ಆಗಲಿಲ್ಲ. ಕಳ್ಳರಿಗೆ ಮೋಟಾರು ಕೊಟ್ಟವರಿಂದ ಏನಾದರು ಸಂಗತಿಗಳು ತಿಳಿಯಬರಬಹುದೆಂದು ಅಲ್ಲಿಯೂ ವಿಚಾರಿಸಿದರು. ಅವರಿಂದ ಕೆಳಗಿನ ಸಂಗತಿಯು ಮಾತ್ರ ತಿಳಿದುಬಂದಿತು.

ಕಳವಾದ ದಿನ ಸಾಯಂಕಾಲ ೫ ಘಂಟೆಯ ಸಮಯದಲ್ಲೊಬ್ಬ ಶ್ರೀಮಂತಿಕೆಯ ಪೋಷಾಕಿನ ಮನುಷ್ಯನು ಬಂದು ತನಗೆ ಅವಶ್ಯ ಕೆಲಸವಿರುವದರಿಂದ ಇಂದು ರಾತ್ರಿ ೮ ಘಂಟೆಯ ಸಮಯಕ್ಕೆ ತನಗೊಂದು ಮೋಟಾರುಕಾರನ್ನು ಬಾಡಿಗೆಗೆ ಕೊಡಬೇಕೆಂದೂ, ಅದನ್ನು ಇಂತಿಷ್ಟೇ ಮೈಲು ತೆಗೆದುಕೊಂಡು ಹೋಗುವೆನೆಂದು ಈಗ ಹೇಳಲಿಕ್ಕೆ ಬರುವಂತಿಲ್ಲವಾದುದರಿಂದ ಬಾಡಿಗೆಯನ್ನು ಮೈಲಿನ ಪ್ರಕಾರ ಕೊಡದೆ ದಿನಬಾಡಿಗೆಯನ್ನು ಕೊಡುತ್ತೇನೆಂದೂ, ಬಂಡಿಯನ್ನು ಮರುದಿನ ಬೆಳಿಗ್ಗೆ ೭ ಘಂಟೆಗೆ ಪುನಃ ತಂದು ಕೊಡುತ್ತೇನೆಂದೂ ಹೇಳಿದನು. ಮೋಟಾರು ನಡೆಸಲು ತಮ್ಮಲ್ಲಿಯೇ ಡ್ರೈವರನಿರುವದರಿಂದ ನಮ್ಮಲ್ಲಿಯ ಡ್ರೈವರನು ಬೇಕಾಗಿಲ್ಲವೆಂದು ಹೇಳಿದನು. ಬಾಡಿಗೆಯ ರೂಪಾಯಿಗಳನ್ನು ಆಗಲೇ ಕೊಟ್ಟು ಹೊರಟು ಹೋದನು. ಆತನು ಇಂಥಾ ಊರಿಗೆ ಹೋಗುವೆನೆಂದು ತಿಳಿಸಲಿಲ್ಲ; ಹಾಗು ಆತನ ನಡೆ-ನುಡಿ-ಸ್ವಭಾವಗಳಿಂದ ನಮಗೆ ಯಾವ ಅನುಮಾನವೂ ಉಂಟಾಗದೆ ಆತನು ಯಾವನೋ ಒಬ್ಬ ಶ್ರೀಮಂತನಿರುವನೆಂದೇ ಭಾವಿಸಿದೆವು. ಆತನು ರಾತ್ರಿ ೮ ಘಂಟೆಯ ಸಮಯದಲ್ಲಿ ಒಬ್ಬ ಡ್ರೈವರನೊಡನೆ ಬಂದು ಮೋಟಾರುಕಾರನ್ನು ಕೊಂಡೊಯ್ದನು. ಮರುದಿನ ಬೆಳಿಗ್ಗೆ ೭ ಘಂಟೆಗೆ ಆ ಡ್ರೈವರನೊಬ್ಬನೇ ಕಾರನ್ನು ನಮ್ಮಲ್ಲಿಗೆ ತಂದೊಪ್ಪಿಸಿದನು.

ಆ ದಿನ ಪೋಲೀಸ ಸುಪರಿಂಡೆಂಟಸಾಹೇಬರಿಗೆ ಮತ್ತೊಂದು ಪತ್ರ ಬಂದಿತು. ಅದರಲ್ಲಿ:—

ಸಾಹೇಬರೇ!

ನಿಮ್ಮ ಕೈಕೆಳಗಿನವರ ಶಾಂತಿ ರಕ್ಷಣೆಯನ್ನೂ, ಪ್ರಜಾ ಸಹಾಯಕ [illegible]ವನ್ನೂ ಮತ್ತು ನಿಮ್ಮ ಸಾಹಸವನ್ನೂ ಚನ್ನಾಗಿ ಮನಗಂಡೆವು; ನಿಮ್ಮಂಥವರು ಈ ಇಲಾಖೆಯಲ್ಲಿ ಸೇರಿದುದರಿಂದಲೇ ನಮ್ಮಂತಹ ವೀರರು ತಲೆಯೆತ್ತಲಿಕ್ಕೆ ಮಾರ್ಗವಾಗಿದೆ. ನೀವು ಪ್ರಜಾ ರಕ್ಷಕರಲ್ಲ, ಭಕ್ಷಕರು! ನಿಮ್ಮ ಶೌರ್ಯವೂ, ಸಾಹಸವೂ ಕೇವಲ ಬಡ ಪ್ರಜೆಗಳ ಮೇಲೇನಾದರೂ ತಪ್ಪುತಪ್ಪು ಹೊರಿಸಿ, ಅವರನ್ನು ಹೆದರಿಸಿ-ಬೆದರಿಸಿ ಪೀಡಿಸುವದರಲ್ಲಿಯೇ ಇರ

ಬಹುದು. ನಿಮ್ಮಲ್ಲಿ ನಿಜವಾದ ಶೌರ್ಯ-ಸಾಹಸಗಳಿದ್ದರೆ ನಮ್ಮನ್ನು ಪತ್ತೆ ಹಚ್ಚಿರಿ. ನಮ್ಮ ಯುಕ್ತಿಯನ್ನು ನಿಮ್ಮವರು ಮಾರ್ಗದಲ್ಲಿಯೇ ಕಂಡಿರುವರು.

ನಿಮ್ಮನ್ನು ವಂಚಿಸಿದ ಕಳ್ಳರ ಗುಂಪಿನ ಹಿರಿಯ.

ಪತ್ರವನ್ನು ಓದಿ ಪೋ|| ಸಾಹೇಬರಿಗೆ ಬಲು ಬೇಸರವಾಯಿತು [illegible]! ನನಗೆ ಈ ತರದ ಕಳಂಕವೇ? ನಾನು ಕಾರ್ಯಹೀನನೇ? ಕಳ್ಳರು ಸಾಮಾನ್ಯರಿರುವದಿಲ್ಲ. ಈ ಗುಂಪಿನಲ್ಲಿ ಯಾರೋ ಪ್ರಬಲ ಯುಕ್ತಿಕೋವಿದರಿರಬೇಕು. ಇವರನ್ನು ಪತ್ತೆಮಾಡಲು ಅಸಾಧ್ಯವಾಗಿರುವದಲ್ಲಾ! ಈಗೇನು ಮಾಡುವದು? ಹೇಗಾದರೂ ಮಾಡಿ ಇವರನ್ನು ಜೈಲಿಗೆ ತಂದು ನನಗೆ ಬಂದಿರುವ ಅಪಕೀರ್ತಿಯನ್ನು ಹೋಗಲಾಡಿಸಲೇಬೇಕು, ಎಂದುಕೊಂಡು ಆ ದಿನವೇ ಆ ಊರಿನಲ್ಲಿ ಹೊರಡುವ "ರಾಮಪುರದ ವಾರ್ತೆ" ಎಂಬ ವೃತ್ತಪತ್ರದಲ್ಲಿ ಈ ಕೆಳಗೆ ಕಂಡಂತೆ ಜಾಹೀರು ಪ್ರಕಟಣೆಯನ್ನು ಕೊಟ್ಟರು.

## ಜಾಹೀರು ಪ್ರಕಟಣೆ.

ಈಗೆಂಟು ದಿನಗಳ ಕೆಳಗೆ ಒಂದು ರಾತ್ರಿ ಇಲ್ಲಿಂದ ೫ ಮೈಲು ದೂರದಲ್ಲಿರುವ ಸೋಮಪುರದ ಶ್ರೀಮಂತ ಗುರುನಾಥರಾಯರ ಮನೆಗೆ ಯಾರೋ ದುರಾತ್ಮರಿಬ್ಬರು ಮೋಟಾರಿನಲ್ಲಿ ಬಂದು ಅವರನ್ನು ಬಂಧಿಸಿ, ಅವರ ಪೆಟ್ಟಿಗೆಯೊಳಗಿದ್ದ ೧೦ ಸಾವಿರ ರೂಪಾಯಿಗಳ ನೋಟುಗಳನ್ನು ಕದ್ದುಕೊಂಡು ಹೋಗಿರುವರು. ಪೋಲೀಸಿನವರು ಶೋಧ ನಡಿಸಿದ್ದಾರೆ; ಆದರೆ ಇನ್ನೂ ಕಳ್ಳರ ಪತ್ತೆಯಾಗಿಲ್ಲ. ಆದುದರಿಂದ ಈ ಕಳ್ಳರನ್ನು ಪತ್ತೆಮಾಡಿ ಕೊಟ್ಟವರಿಗೆ ಸರಕಾರದವರು ವಿಶೇಷ ಬಹುಮಾನವನ್ನು ಕೊಡುವರಲ್ಲದೆ, ಗುರುನಾಥರಾಯರೂ ಮೂರು ಸಾವಿರ ರೂಪಾಯಿಗಳನ್ನು ಬಹುಮಾನವಾಗಿ ಕೊಡುವರು.

ಮೊಕ್ಕಾಂ ರಾಮಪುರ, }   (ರುಜು)
ತಾ||............................ }   ಪೋಲೀಸ ಸುಪರಿಂಟೆಂಡೆಂಟ.

---

## ( ೫ )

ಆಗಲೇ ಸಾಯಂಕಾಲದ ೫ ಘಂಟೆಯು ಬಡೆದುಹೋಗಿತ್ತು. ಭಗವಾನ್ ದಿನಕರನು ಹಗಲೆಲ್ಲಾ ನಭೋ ಮಾರ್ಗದಲ್ಲಿ ನಡೆದ ದಣುವನ್ನು ಬೇಗನೇ ಕಳೆದುಕೊಳ್ಳುವೆನೆಂಬ ಸಂತೋಷದಿಂದಲೋ, ಏನೋ? ಹೊಂಬಣ್ಣದಿಂದ ಕಂಗೊಳಿಸುತ್ತ ಪಶ್ಚಿಮಾಂಗನೆಯ ಭವನಾಭಿಮುಖವಾಗಿ ತೆರಳುತ್ತಿದ್ದನು. [illegible]

ದಿಂದ ರಾಮಪುರಕ್ಕೆ ಬರುವ ಮೋಟಾರುಬಂಡಿಯು ಬಂದು ಆಗಲೇ ೫ ನಿಮಿಷವಾಗಿದ್ದಿತು. ಇಂತಹ ಪ್ರಶಾಂತ ಸಾಯಂಕಾಲದ ಸಮಯದಲ್ಲಿ ಒಬ್ಬ ಹಳ್ಳಿಯ ಒಕ್ಕಲಿಗನು ಅದೇನು ಕೆಲಸವೋ? ನೆಟ್ಟಗೆ ಪೋಲೀಸ ಸುಪರಿಂಡೆಂಟಸಾಹೇಬರ ಬಂಗ್ಲೆಗೆ ಬಂದು ಹೊರಗಿರುವ ಜವಾನನನ್ನು ಕುರಿತು:—ಸಾಹೇಬರು ಇರುವರೇ? ಎಂದು ಕೇಳಿದನು.

ಆ ಮನುಷ್ಯನ ಮುಖಲಕ್ಷಣ, ದೇಹದ ದಾರ್ಢ್ಯ, ಕಣ್ಣಿನ ಚಂಚಲತೆ ಇವುಗಳ ಮೇಲಿಂದ ಆತನು ಕೇವಲ ಹಳ್ಳಿಯ ಒಕ್ಕಲಿಗನಾಗಿರದೆ ಯಾವನೋ ಒಬ್ಬ ಬುದ್ಧಿವಂತ ಚಾಣಾಕ್ಷ ಮನುಷ್ಯನಿರುವನೆಂದು ಸೂಕ್ಷ್ಮದೃಷ್ಟಿಯ ಚಾಣಾಕ್ಷರಿಗೆ ತಟ್ಟನೆ ಹೊಳೆಯುವಂತಿತ್ತು. ಆ ಮನುಷ್ಯನ ಪ್ರಶ್ನೆಗೆ ಜವಾನನು:—ಹೌದು! ಇರುವರು, ಎಂದನು.

ಅಷ್ಟರಲ್ಲಿ ಒಳಗೆ ಕುಳಿತಿದ್ದ ಸಾಹೇಬರು:-ವೆಂಕಟಾ ಯಾರು ಬಂದವರು? ಎಂದು ಕೇಳಲು, ವೆಂಕಟ ಜವಾನನು:-ಹುಜೂರ, ಯಾವನೋ ಒಬ್ಬ ಹಳ್ಳಿಯವನು ಬಂದು ತಮ್ಮನ್ನು ವಿಚಾರಿಸುತ್ತಿರುವನು, ಎಂದನು. ಪುನಃ ಸಾಹೇಬರು:-ಆತನನ್ನು ಒಳಕ್ಕೆ ಬಿಡು, ಎಂದಕೂಡಲೆ ಆ ಆಗಂತುಕ ಮನುಷ್ಯನು ನೆಟ್ಟಗೆ ಒಳಗೆ ಹೋಗಿ ಸಾಹೇಬರಿಗೆ ಸಲಾಂ ಮಾಡಿ ನಿಂತುಕೊಂಡನು. ಸಾಹೇಬರು ಆ ಮನುಷ್ಯನನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ:—ಯಾವ ಊರು ನಿನ್ನದು? ಏನು ಉದ್ದೇಶದಿಂದ ಬಂದಿರುವಿ? ಎಂದು ಕೇಳಿದರು.

ಹಳ್ಳಿಯ ಮನುಷ್ಯ:—ಸ್ವಾಮೀ, ತಮ್ಮೊಡನೆ ರಹಸ್ಯವಾಗಿ ಮಾತನಾಡತಕ್ಕದ್ದಿದೆ. ಇಲ್ಲಿ ಯಾರಾದರೂ ಹೊಂಚು ಕೇಳುವವರಿಲ್ಲವಷ್ಟೆ?

ಮನುಷ್ಯನ ಮಾತನ್ನು ಕೇಳಿ, ಸಾಹೇಬರಿಗೆ ಆಶ್ಚರ್ಯವಾಯಿತು. ಈತನೆಂತಹ ರಹಸ್ಯವನ್ನು ಹೇಳುವನು? ಎಂದುಕೊಂಡು, ಆತನ ರಹಸ್ಯವನ್ನು ತಿಳಿಯಬೇಕೆಂದು ಜವಾನನನ್ನು ಕರೆದು:—ವೆಂಕಟಾ, ಬಂಗ್ಲೆಯ ಸುತ್ತಲೂ ಚನ್ನಾಗಿ ನೋಡಿ, ಬಾಗಿಲ ಬಳಿಯಲ್ಲಿರು. ಇನ್ನು ಒಂದು ಘಂಟೆಯ ಕಾಲ ಯಾರನ್ನೂ ಒಳಗೆ ಬಿಡಬೇಡ, ಎಂದರು. ಜವಾನನು ಅಪ್ಪಣೆಯ ಮೇರೆಗೆ ಬಾಗಿಲ ಬಳಿಯಲ್ಲಿ ಕಾವಲಿದ್ದನು.

ಆಗ ಆಗಂತುಕ ಮನುಷ್ಯನು ಸಾಹೇಬರ ಹತ್ತಿರ ಹೋಗಿ, ಒಂದು ಖುರ್ಚಿಯಲ್ಲಿ ಕುಳಿತು:—ಸ್ವಾಮೀ, ನನ್ನ ಗುರುತು ತಮಗಿಲ್ಲ. ನನ್ನ ಊರು

ಕೃಷ್ಣನಗರವು. ನನ್ನ ಹೆಸರು ನರಸಿಂಗರಾಯ. ತಾವು ನನ್ನ ಹೆಸರನ್ನು ಕೇಳಿರಬಹುದು.

ಸಾಹೇಬರು(ಆಶ್ಚರ್ಯದಿಂದ):—ಓಹೋ! ಪ್ರಸಿದ್ಧ ಪತ್ತೇದಾರರಾದ ನರಸಿಂಗರಾಯರು ತಾವೇಯೋ? ತಮ್ಮನ್ನು ನಾನು ನೋಡಿರಲಿಲ್ಲ ಇನ್ನೇನು? ತಾವು ಬಂದುದರಿಂದ ನಮ್ಮ ಕೇಸು ಪತ್ತೆಯಾದಂತೆಯೇ ಸರಿ.

ನರಸಿಂಗ:—ಹೌದು! ನಾನೇ ಪತ್ತೇದಾರ ನರಸಿಂಗರಾಯನು. ತಾವು ನಮ್ಮೂರಿಗೆ ವರ್ಗವಾಗಿ ಬಂದಾಗ ನಾನು ಒಂದು ಕೆಲಸಕ್ಕಾಗಿ ಉತ್ತರ ದೇಶದ ಕಡೆಗೆ ಹೋಗಿದ್ದೆನು. ಆದುದರಿಂದ ನನ್ನ ಪರಿಚಯವು ತಮಗಿಲ್ಲ. ನಾನು ಮೊನ್ನೆ ಊರಿಗೆ ಬಂದೆನು. ಆಗ ಇಲ್ಲಿ ನಡೆದ ಕಳವಿನ ವಿಷಯವಾಗಿ ಹಾಗೂ ವೃತ್ತಪತ್ರದಲ್ಲಿ ಪ್ರಕಟಿಸಿದ ಪ್ರಕಟನೆಯನ್ನೂ ನೋಡಿ, ಈ ಕೃತ್ಯವನ್ನು ಪತ್ತೇ ಮಾಡಬೇಕೆಂದು ಈ ದಿನ ಮೋಟಾರಿನಲ್ಲಿ ಬಂದೆನು.

ಸಾಹೇಬರು:—ತಾವು ಸಮಯಕ್ಕೆ ಸರಿಯಾಗಿ ಬಂದುದು ಸಂತೋಷವು; ಹಾಗು ನಮ್ಮ ಭಾಗ್ಯೋದಯವೆಂದೇ ಭಾವಿಸುವೆವು; ಇನ್ನು ಕಳ್ಳರ ಪತ್ತೆಯಾದಂತೆಯೇ ತಿಳಿದುಕೊಳ್ಳುವೆವು. ತಾವು ಹೀಗೆ ವೇಷಧಾರಿಗಳಾಗಿ ಬರಲು ಕಾರಣವೇನು?

ನರಸಿಂಗ:—ಸ್ವಾಮಿ, ಕಳ್ಳರು ಕೆಲವು ವೇಳೆ ನಮಗಿಂತಲೂ ಬುದ್ಧಿವಂತರಾಗಿರುತ್ತಾರೆ. ಆದುದರಿಂದ ನಾವು ಅವರ ಪತ್ತೆಯಾಗುವವರೆಗೆ ನಿಜ ರೂಪದಿಂದ ತಿರುಗುವದು ಮೋಸವಾಗುತ್ತದೆ. ಇದು ನನಗೆ ಎಷ್ಟೋ ಸಾರೆ ಅನುಭವಕ್ಕೆ ಬಂದಿದೆ. ಆದುದರಿಂದ ನಾನಾವಾಗಲೂ ಕಳ್ಳರ ಪತ್ತೇಮಾಡಲು ವೇಷಧಾರಿಯಾಗಿಯೇ ಇರುವೆನು ಅದಿರಲಿ. ತಮಗೆ ಈಗ ನಡೆದ ಕಳುವಿನ ಬಗ್ಗೆ ಗೊತ್ತಿರುವ ಎಲ್ಲಾ ಸಂಗತಿಗಳನ್ನು ದಯವಿಟ್ಟು ತಿಳಿಸಿರಿ.

ಸೂಪರಿಂಡೆಂಟರು ಕಳ್ಳರು ತಮಗೆ ಪತ್ರ ಬರೆದುದು, ತಾವು ಪೋಲೀಸಿನವರನ್ನು ಕಳಿಸಿದುದು, ಅವರಿಗೆ ದಾರಿಯಲ್ಲುಂಟಾದ ತೊಂದರೆ, ಗುರುನಾಥರಾಯನಿಗೆ ಕಳ್ಳರು ಪತ್ರ ಬರೆದ ಸಂಗತಿ, ಆ ನೀಚರು ಅವನನ್ನು ವಂಚಿಸಿ ಹಣವನ್ನು ಕದ್ದುಕೊಂಡು ಹೋದುದು, ಮೋಟಾರು ಆಫೀಸಿನವರಿಂದ ತಮಗೆ ತಿಳಿದ ವಿಷಯ, ಪುನಃ ತಮಗೆ ಬಂದ ಪತ್ರ ಇವೇ ಮೊದಲಾದ ಸಂಗತಿಗಳನ್ನು ವಿವರವಾಗಿ ತಿಳಿಸಿದರು.

ಆಗ ನರಸಿಂಗರಾಯನು:—ಕಳ್ಳರು ತಕ್ಕಮಟ್ಟಿಗೆ ಬುದ್ಧಿವಂತರೇ ಆಗಿ

ದ್ದಾರೆ. ಇರಲಿ. ಅವರು ಬರೆದ ಪತ್ರಗಳನ್ನು ಕೊಡಿ, ನೋಡೋಣ, ಎಂದನು. ಸಾಹೇಬರು ರಿಕಾರ್ಡು ಕಟ್ಟಿನೊಳಗಿಂದ ಅವೆರಡು ಪತ್ರಗಳನ್ನು ತೆಗೆದು ನರಸಿಂಗರಾಯನ ಕೈಗೆ ಕೊಟ್ಟರು. ನರಸಿಂಗರಾಯನು ಅವುಗಳನ್ನೊಮ್ಮೆ ಓದಿ ಈ ಪತ್ರಗಳು ನನ್ನ ಹತ್ತರವೇ ಇರಲಿ ನಾನು ಬಂದ ವಿಷಯವನ್ನು ನೀವು ಪ್ರಕಟಮಾಡಕೂಡದು. ನನ್ನನ್ನು ಅವಶ್ಯಕವಾಗಿ ಕಾಣುವ ಸಂದರ್ಭ ಬಂದಾಗ ಒಂದು ಕವರಿನಲ್ಲಿ ಬರೇ ಕಾಗದವನ್ನಿಟ್ಟು ರಾಮಪುರದ ಕೃಷ್ಣವಿಲಾಸ ಹೋಟೆಲ್ಲಿನಲ್ಲಿರುವ ಶಂಕರನಿಗೆ ಎಂದು ಬರೆದು ಹಾಕಿಬಿಡಿ. ಈಗ ನಾನು ಹೋಗುತ್ತೇನೆ, ಎಂದು ಸಾಹೇಬರ ಅಪ್ಪಣೆ ಪಡೆದು ಹೊರಟು ಹೋದನು.

†‡† ‡†‡ †‡† ‡†‡ †‡†

ಮರುದಿನ ನರಸಿಂಗರಾಯನು ಫಕೀರನ ವೇಷದಿಂದ ಮೋಟಾರು ಆಫೀಸಿಗೆ ಹೋಗಿ, ಅಲ್ಲಿಯ ಮ್ಯಾನೇಜರನನ್ನು ಗುಪ್ತವಾಗಿ ಕಂಡು ಆತನಿಗೆ ತನ್ನ ಪರಿಚಯವನ್ನು ತಿಳಿಸಿ, ಆತನು ಕಳ್ಳರಿಗೆ ಮೋಟಾರು ಕೊಟ್ಟ ಸಂಗತಿಯ ಬಗ್ಗೆ ಪ್ರಶ್ನೆ ಮಾಡಿದನು. ಅದಕ್ಕೆ ಮ್ಯಾನೇಜರನು ಹಿಂದೆ ಸುಪರಿಂಡೆಂಟಸಾಹೇಬರಿಗೆ ಹೇಳಿದ ಸಂಗತಿಗಳನ್ನೇ ಈಗ ನರಸಿಂಗರಾಯನಿಗೂ ತಿಳಿಸಿದನು.

ನರಸಿಂಗರಾಯ:—ತಾವು ಮೋಟಾರು ಕೇಳುವದಕ್ಕೆ ಹಾಗು ತೆಗೆದುಕೊಂಡು ಹೋಗುವದಕ್ಕೆ ಬಂದ ಆ ಮನುಷ್ಯರನ್ನು ಹಿಂದೆ ಯಾವಾಗಲಾದರೂ ನೋಡಿದ್ದಿರಾ?

ಮ್ಯಾನೇಜರ:—ಹಿಂದೆ ಯಾವಾಗಲೂ ನಾನವರನ್ನು ನೋಡಿದ್ದಿಲ್ಲ. ಮೊನ್ನೆಯೇ ನಾನವರನ್ನು ನೋಡಿದುದು; ಅದೇ ಮೊದಲನೇ ಸಾರೆ.

ನರಸಿಂಗ:—ಹಾಗಾದರೆ ಅವರ ಆಕಾರವು ಹೇಗಿತ್ತು? ಅವರ ವೇಷಭೂಷಗಳು ಹೇಗಿದ್ದವು?

ಮ್ಯಾನೇಜರ:—ಮೋಟಾರು ಕೇಳಲು ಬಂದವನು ಸುಮಾರು ೫|| ಅಡಿ ಎತ್ತರವಿದ್ದು ಬಳ್ಳಿಯ ದೃಢಕಾಯನಾಗಿಯೂ ಬಲಿಷ್ಠನಾಗಿಯೂ ಇದ್ದನು. ಆತನ ವಯಸ್ಸು ಸುಮಾರು ೩೦-೩೫ ರ ಒಳಗೆ ಇರಬಹುದು. ಆತನು ಸಾದುಗಪ್ಪು ಇದ್ದು, ಈಗಿನ ನಮೂನೆಯಂತೆ ಮೀಸೆಯನ್ನು ಬಿಡಿಸಿದ್ದನು. ಆತನು ಶ್ರೀಮಂತಿಕೆಗೆ ತಕ್ಕದಾದ ಬೆಲೆಯುಳ್ಳ ಉಡುಪನ್ನು ಧರಿಸಿದ್ದನು. ರಾತ್ರಿ ಮೋಟಾರು ತೆಗೆದುಕೊಂಡು ಹೋಗುವದಕ್ಕೆ ಇವನ ಜೊತೆಯಲ್ಲಿ ಇನ್ನೊಬ್ಬನು ಬಂದಿದ್ದನು. ಆತನೇ ಡ್ರೈವರನಾಗಿದ್ದನು. ಆತನು ಸ್ವಲ್ಪ ಗಿಡ್ಡನಾಗಿದ್ದನು.

ಆತನೂ ಬಲಿಷ್ಠನಾಗಿಯೂ ದೃಢಕಾಯನಾಗಿಯೂ ಇದ್ದನು. ಆತನು ಮೋ-
ಟಾರು ಡ್ರೈವರನಿಗೆ ತಕ್ಕ ಉಡುಪನ್ನು ಧರಿಸಿದ್ದನು. ನರಸಿಂಗರಾಯನು
ಮ್ಯಾನೇಜರನಿಂದ ಇಷ್ಟು ಸಂಗತಿಗಳನ್ನು ತಿಳಿದುಕೊಂಡ ತರುವಾಯ ಆತನನ್ನು
ಕುರಿತು:—ನಾನು ಬಂದಿರುವ ವಿಷಯವನ್ನು ಮತ್ತಾರೊಂದಿಗೂ ತಿಳಿಸಬೇಡಿರಿ.
ನನ್ನ ಕಾರ್ಯವು ಸಫಲವಾಗುವವರೆಗೆ ಗುಪ್ತದಲ್ಲಿಟ್ಟಿರಬೇಕು. ಈಗ ತಾವು
ನನ್ನನ್ನು ಹೊರದೂಡಿಸಿ ಬಿಡಿರಿ ಇದರಿಂದ ನಾನು ತಮ್ಮ ಬಳಿಗೆ ಬಂದದ್ದಕ್ಕೆ
ಯಾರಿಗೂ ಸಂಶಯವಾಗುವದಿಲ್ಲ, ಎಂದನು.

ಮ್ಯಾನೇಜರನು ನರಸಿಂಗರಾಯನ ಮಾತಿಗೆ ಆಶ್ಚರ್ಯಪಟ್ಟು ಒಬ್ಬ
ಜವಾನನನ್ನು ಕರೆದು:—ಈ ಫಕೀರನು ದುಡ್ಡಿಲ್ಲದೆ ತಿಕೀಟು ಕೊಡಬೇಕೆಂದು
ಪೀಡಿಸುತ್ತಿರುವನು. ಈತನನ್ನು ಕತ್ತುಹಿಡಿದು ಹೊರಕ್ಕೆ ದಬ್ಬು, ಎಂದನು.

ಕೂಡಲೇ ಜವಾನನು ನರಸಿಂಗರಾಯನನ್ನು ಕತ್ತುಹಿಡಿದು:-ಏ ಫಕೀರಾ,
ನಿನಗೆ ದುಡ್ಡಿಲ್ಲದೆ ಟಿಕೀಟ ಕೊಡಬೇಕೆ? ಹೋಗು. ನಿನ್ನಪ್ಪನ ಮನೆಗೆ, ಎಂದು
ಆಫೀಸಿನಿಂದ ಹೊರಕ್ಕೆ ದೂಡಿಬಿಟ್ಟನು. ಫಕೀರನು ಹೊರಟು ಹೋದನು.

---

( ೬ )

ಮಧ್ಯಾಹ್ನ ಮೂರು ಘಂಟೆಯ ಸಮಯವು, ಸೂರ್ಯನ ತಾಪವು
ಅತ್ಯಂತ ಪ್ರಖರವಾಗಿದ್ದಿತು, ಬಿಸಿಲಿನ ಝಳಕ್ಕೆ ಜನರೆಲ್ಲರೂ ಬೆಂದು ಬೆಂಡಾಗು
ತ್ತಿದ್ದರು; ಜನರೆಲ್ಲರೂ ಮನೆಯಿಂದ ಹೊರಗೆ ಹೊರಡುತ್ತಿರಲಿಲ್ಲ. ಒಬ್ಬ
ಮಲೆಯಾಳಿಯು ಬಿಸಿಲಿನ ಬೇಗೆಯನ್ನು ಲಕ್ಷ್ಯ ಮಾಡದೆ ಸೋಮಪುರದ
ಗುರುನಾಥರಾಯರ ಮನೆಗೆ ಬಂದನು. ಆತನು ನೋಡುವುದಕ್ಕೆ ಸುಂದರ
ನಾಗಿದ್ದನು. ಅವನು ಮಲೆಯಾಳಿಗಳಿಗೆ ತಕ್ಕಂತೆ ಒಂದು ಮಲ್ಲಿನ ನಾಲ್ಕು
ಮೊಳದ ತುಂಡನ್ನು ಸೊಂಟಕ್ಕೆ ಸುತ್ತಿಕೊಂಡು, ಅಂಥದೇ ಮಲ್ಲಿನ ಬಂಡಿ
ಯನ್ನು ತೊಟ್ಟುಕೊಂಡಿದ್ದನು. ಹೆಗಲ ಮೇಲೊಂದು ಚಿಕ್ಕ ಚೌಕವಿದ್ದಿತು.
ಆತನು ಮಲೆಯಾಳಿಗಳಂತೆ ಮುಂದುಗಡೆ ಜುಟ್ಟನ್ನು ಗಂಟು ಹಾಕಿಕೊಂಡಿ
ದ್ದನು. ಆತನ ಕೈಯಲ್ಲೊಂದು ದೊಣ್ಣೆಯೂ, ಬಗಲಲ್ಲಿ ಔಷಧಿಗಳನ್ನಿಡುವ
ಚಿಕ್ಕ ಚೌಕವಾದ ಪೆಟ್ಟಿಗೆಯನ್ನು ಬಟ್ಟೆಯಲ್ಲಿ ಕಟ್ಟಿ ಜೋಲು ಬಿಟ್ಟುಕೊಂಡಿ
ದ್ದನು. ಆತನ ಸರ್ವಾಂಗವೂ ಬಿಸಿಲಿನ ತಾಪದಿಂದ ಬೆವರಿ, ಬಟ್ಟೆಗಳೆಲ್ಲವೂ
ತೊಯ್ದು ತೊಪ್ಪಡಿಯಾಗಿದ್ದಿತು.

ಗುರುನಾಥರಾಯನು ಕಳುವಾದಂದಿನಿಂದ ಅಪರಿಚಿತರನ್ನು ಮನೆಗೆ ಬರಗೊಡುತ್ತಿರಲಿಲ್ಲ. ಬಾಗಿಲಕಾಯುವವನು ಈ ವಿಷಯದಲ್ಲಿ ಬಹಳ ದಕ್ಷನಾಗಿದ್ದನು.

ಈ ದಿನ ಒಬ್ಬ ಮಲೆಯಾಳಿಯು ತಮ್ಮ ಮನೆಯ ಹತ್ತಿರಕ್ಕೆ ಬಂದುದನ್ನು ನೋಡಿ ಸೇವಕನು:—‚‚ಓ ಮಲಿಯಾಳಿಗಳೇ, ತಮಗೆ ಇಲ್ಲೇನು ಕೆಲಸವಿಲ್ಲ, ಮುಂದಕ್ಕೆ ದಯಮಾಡಿಸಿ'' ಆಗ ಮಲೆಯಾಳಿಯು (ವಿನಯದಿಂದ):--ಅಯ್ಯಾ! ರಾಯರು ಇದ್ದಾರೆಯೋ? ನಿಮ್ಮ ರಾಯರೊಡನೆ ನಾನು ಮಾತಾಡತಕ್ಕದ್ದಿದೆ....

ಸೇವಕ:--ರಾಯರ ಹತ್ತಿರ ನಿಮಗೇನು ಕೆಲಸ? ಮೊದಲು ಇಲ್ಲಿಂದ ಹೊರಡಿ! ಹೂ! ಏನು? ಹೊರಡುತ್ತಿರೋ, ಇಲ್ಲವೋ?

ಮಲೆಯಾಳಿ:—ಅಯ್ಯಾ! ಸ್ವಲ್ಪ ನಿದಾನಿಸು! ಈಗೆರಡು ತಿಂಗಳ ಹಿಂದೆ ನಾನಿಲ್ಲಿಗೆ ಬಂದಾಗ ನಿಮ್ಮ ರಾಯರು ಒಂದು ಔಷಧಿಯನ್ನು ತಂದುಕೊಡುವಂತೆ ಹೇಳಿದ್ದರು. ಈಗ ಆ ಔಷಧಿಯನ್ನು ತಂದಿರುವೆನು. ಆದುದರಿಂದ ನಾನು ನಿಮ್ಮ ರಾಯರನ್ನು ಕಾಣಬೇಕಾಗಿದೆ.

ಸೇವಕನು ಒಳಗೆ ಬಂದು ಯಾವನೋ ಮಲೆಯಾಳಿ ಪಂಡಿತನು ನಿಮ್ಮ ಪ್ಪಣೆಯಂತೆ ಔಷಧವನ್ನು ತೆಗೆದುಕೊಂಡು ಬಂದಿರುವೆನೆಂದೂ, ನಿಮ್ಮನ್ನು ಕಾಣಬೇಕೆಂದು ಹಟ ಹಿಡಿದಿರುವನೆಂದೂ ಹೇಳಿದನು.

ಗುರುನಾಥರಾಯನು ಅಂಗಳದಲ್ಲಿ ಮಲೆಯಾಳಿಗೂ ಸೇವಕನಿಗೂ ನಡೆಯುವ ವಾದವನ್ನು ಕೇಳುತ್ತಿದ್ದದರಿಂದ ಮಲೆಯಾಳಿಯು ತನ್ನನ್ನು ಕಾಣುವದರಲ್ಲಿ ಏನೋ ರಹಸ್ಯವಿರಬೇಕೆಂದೂ, ಈ ಮಲೆಯಾಳಿಯು ನಿಜವಾದ ಮಲೆಯಾಳಿಯಾಗಿರದೆ ಯಾವನೋ ಒಬ್ಬ ಧೂರ್ತನಿರಬೇಕೆಂದೂ ತರ್ಕಿಸಿ, ಸೇವಕನನ್ನು ಕುರಿತು:—

ಎಲೋ! ನಾನು ಅವರೊಡನೆ ಔಷಧ ತರಲಿಕ್ಕೆ ಹೇಳಿದುದು ನಿಜ; ಆ ಪಂಡಿತರನ್ನು ಒಳಕ್ಕೆ ಬಿಡು ಎಂದಂದನು.

ಕೂಡಲೆ ಮಲೆಯಾಳಿಯು ಒಳಕ್ಕೆ ಬಂದು ರಾಯರಿಗೆ ನಮಸ್ಕರಿಸಿ, ಅಲ್ಲಿ ಹಾಸಿರುವ ಜಮಖಾನೆಯ ಮೇಲೆ ಕುಳಿತುಕೊಂಡನು.

ಗುರುನಾಥರಾಯ:—ಪಂಡಿತರೇ, ನಿಮ್ಮ ಪರಿಚಯವು ನನಗಿಲ್ಲ. ಆದರೂ ನೀವು ನನ್ನನ್ನು ಕಾಣಲೇಬೇಕೆಂದು ಸೇವಕರೊಡನೆ ವಾದಿಸುತ್ತಿದ್ದುದನ್ನು ಏನೋ ವಿಶೇಷವಿರಬೇಕೆಂದು ತಿಳಿದೆನು. ತಾವು ಯಾರು?

ಮಲೆಯಾಳಿ:—ರಾಯರೇ! ನನ್ನ ಪರಿಚಯವು ತಮಗಿಲ್ಲದಿರುವದು ನಿಜ; ಆದರೆ ನನ್ನ ಹೆಸರನ್ನು ತಾವು ಕೇಳಿರಬಹುದು. ನಾನು ಕೃಷ್ಣನಗರದ ಪತ್ತೇದಾರ ನರಸಿಂಗರಾಯನು.

ಗುರುನಾಥರಾಯ (ಆಶ್ಚರ್ಯದಿಂದ):—ಓಹೋ! ತಾವೇನೋ? ಪತ್ತೇದಾರ ನರಸಿಂಗರಾಯರು! ತಾವು ಬಂದುದು ಸಂತೋಷವಾಯಿತು. ತಾವು ನನ್ನಲ್ಲಿ ಆದ ಕಳುವನ್ನು ಪತ್ತೇ ಮಾಡಲಿಕ್ಕಾಗಿಯೇ ಬಂದಿರುವಿರೆಂದು ಭಾವಿಸುವೆನು.

ನರಸಿಂಗ:—ರಾಯರೇ! ನಿಮ್ಮ ಭಾವನೆಯಂತೆಯೇ ನಾನು ನಿಮ್ಮಲ್ಲಿ ಆದ ಕಳುವನ್ನು ಪತ್ತೇಮಾಡಲು ಬಂದಿರುವದು ನಿಜ; ಎಂದು ತಾನು ಬಂದ ಸಂಗತಿಯನ್ನು ವಿವರಿಸಿ, ರಾಯರೇ! ಈ ಕಳವಿನ ಬಗ್ಗೆ ನಿಮಗೆ ಗೊತ್ತಿರುವ ಎಲ್ಲ ಸಂಗತಿಗಳನ್ನು ತಿಳಿಸುವಿರಾ? ಎಂದು ಪ್ರಶ್ನೆ ಮಾಡಿದನು.

ಗುರುನಾಥರಾಯ:—(ಸಂತೋಷದಿಂದ ನರಸಿಂಗರಾಯರನ್ನು ಅಭಿನಂದಿಸುತ್ತ) ಕಳುವಾದಂದಿನಿಂದ ಈ ವರೆಗೆ ನಡೆದ ಯಾವತ್ತು ಸಂಗತಿಗಳನ್ನೆಲ್ಲ ವಿವರಿಸಿ ಹೇಳಿದನು.

ನರಸಿಂಗ:—ರಾಯರೇ, ನಿಮಗೆ ಯಾರ ಮೇಲಾದರೂ ಸಂಶಯವಿದೆಯೇ?

ಗುರುನಾಥ:—ಇಲ್ಲ! ನನಗೆ ಯಾರ ಮೇಲೂ ಸಂಶಯವಿಲ್ಲ.

ನರಸಿಂಗ:—ನಿಮ್ಮನ್ನು ಯಾರಾದರೂ ದ್ವೇಷಿಸುವರುಂಟೋ? ನಿಮ್ಮ ಶತ್ರುಗಳಲ್ಲಿ ಪ್ರಬಲರು ಯಾರಾದರೂ ಇದ್ದಾರೆಯೋ?

ಗುರುನಾಥರಾಯರು:—ನಮ್ಮನ್ನು ದ್ವೇಷಿಸುವರಿಗೇನು ಬರಗಾಲ! ನಮ್ಮ ಐಶ್ವರ್ಯವನ್ನು ನೋಡಿ ಅಸೂಯೆಪಡುವವರೆಷ್ಟೋ ಮಂದಿ ಇದ್ದಾರೆ; ಆದರೆ ಬಹಿರಂಗವಾಗಿ ಯಾರೂ ನಮ್ಮನ್ನು ದ್ವೇಷಿಸುವವರಿಲ್ಲ. ಹಾಗೆ ದ್ವೇಷಿಗಳಲ್ಲಿ ಪ್ರಬಲರು ಯಾರೂ ಇಲ್ಲ.

ನರಸಿಂಗರಾಯನು ಸ್ವಲ್ಪ ಹೊತ್ತು ಗಹನವಾದ ಆಲೋಚನಾ ಮಗ್ನನಾದನು. ಗುರುನಾಥರಾಯನು ಕಾಫಿಯನ್ನು ತರುವಂತೆ ಸೇವಕನನ್ನು ಕಳಿಸಿದನು.

ನರಸಿಂಗರಾಯನು(ಪುನಃ):—ರಾಯರೇ, ಇಷ್ಟು ದೊಡ್ಡ ವ್ಯವಹಾರವನ್ನು ಸಹಾಯಕರಿಲ್ಲದೆ ನೀವೊಬ್ಬರೇ ನೋಡಿಕೊಳ್ಳುತ್ತೀರಾ? ನಿಮಗೆ ಗುಮಾಸ್ತರಾರೂ ಇಲ್ಲವೇ?

ಗುರುನಾಥ:—ಈಗೆರಡು ತಿಂಗಳಿಂದ ಗುಮಾಸ್ತನಿಲ್ಲಗೆ ನಾನೊಬ್ಬನೇ

ಕೆಲಸ ನಡಿಸಿರುವೆನು. ಅದಕ್ಕೆ ಹಿಂದೆ ಒಬ್ಬ ಗುಮಾಸ್ತನಿದ್ದನು.

ನರಸಿಂಗ:—ಅದೇನು? ಆ ಗುಮಾಸ್ತನನ್ನು ನೀವಾಗಿ ಬಿಟ್ಟಿರೋ? ಅಥವಾ ಅವನಾಗಿಯೇ ಹೊರಟು ಹೋದನೋ?

ಗುರುನಾಥರಾಯ:—ನಾನಾಗಿಯೇ ಆತನನ್ನು ಬೇಡವೆಂದು ಬಿಟ್ಟೆನು. ಆತನು ಲೆಖ್ಖದಲ್ಲಿ ಹೆಚ್ಚುಕಡಿಮೆ ಮಾಡಿ ಸುಮಾರು ೧೫೦ ರೂಪಾಯಿಗಳನ್ನು ಎತ್ತಿಹಾಕಿಬಿಟ್ಟನು. ಅದರಿಂದ ಆತನನ್ನು ಕೆಲಸದಿಂದ ತೆಗೆದೆನು.

ನರಸಿಂಗ:—ಹಾಗಾದರೆ ಈಗ ಅವನು ಎಲ್ಲಿರುವನು? ಅವನ ಹೆಸರೇನು?

ಗುರುನಾಥರಾಯ:—ಅವನ ಹೆಸರು ಸದಾಶಿವ, ಈಗ ಆತನು ರಾಮಪುರದಲ್ಲಿದ್ದಾನೆ.

ನರಸಿಂಗ:—ರಾಮಪುರದಲ್ಲಿ ಆತನು ಜೀವನಕ್ಕೆ ಏನು ಮಾಡಿಕೊಂಡಿರುವನು? ಅವನ ಸ್ವಭಾವವು ಹೇಗೆ?

ಗುರುನಾಥ:—ಹುಡುಗನು ಒಳ್ಳೇಯುವನು, ಬುದ್ಧಿಶಾಲಿ; ಆದರೆ ಆತ್ಯಾಶೆಗೊಳಗಾಗಿ ನನಗೆ ಮೋಸ ಮಾಡಿದನು. ಅಕ್ಷರಗಳನ್ನು ನೀಟಾಗಿಯೂ, ಮುದ್ದಾಗಿಯೂ ಬರೆಯುವದರಲ್ಲಿ ಗಟ್ಟಿಗನು. ರಾಮಪುರದಲ್ಲ ಯಾರಲ್ಲಿಯೋ ಗುಮಾಸ್ತನಾಗಿ ಸ್ವಂತ ಮನೆ ಮಾಡಿಕೊಂಡಿರುವನಂತೆ, ಎಂದು ನುಡಿದು ಕಪಾಟಿನಲ್ಲಿದ್ದ ಒಂದು ಪುಸ್ತಕವನ್ನು ತೆಗೆದು ನರಸಿಂಗರಾಯನ ಕೈಗೆ ಕೊಟ್ಟು ಇದರಲ್ಲಿ ನೋಡಿರಿ, ಆತನ ಬರವಣಿಗೆಯ ಅಂದವನ್ನು, ಎಂದನು.

ಪುಸ್ತಕವನ್ನು ನೋಡಿದೊಡನೆಯೇ ನರಸಿಂಗರಾಯನ ಮುಖವು ಹಿಗ್ಗಿ ಇಷ್ಟಗಲವಾಯಿತು. ತನ್ನ ಕಾರ್ಯವು ಕೈಗೂಡುವ ಸುಪ್ರಸಂಗ ಬಂದಿತೆಂದು ಆತನ ಮುಖಭಾವದಿಂದ ವ್ಯಕ್ತವಾಗುತ್ತಿದ್ದಿತು. ತನ್ನ ಮುಖದ ಬದಲಾವಣೆಯನ್ನು ಹೊರಕ್ಕೆ ತೋರಿಸದೆ ನರಸಿಂಗರಾಯನು ಗುರುನಾಥರಾಯನಿಗೆ:—

ನಾನು ಈವರೆಗೆ ಇಷ್ಟು ಅಂದವಾಗಿ ಬರೆಯುವವರನ್ನು ನೋಡಿಲ್ಲ ಬರವಣಿಗೆಯು ಬಹಳ ಚನ್ನಾಗಿದೆ. ನೀವು ಆತನನ್ನು ಕೆಲಸದಿಂದ ಬಿಡಿಸಿದಾಗ ನಿಮ್ಮ ಮೇಲೇನಾದರೂ ಕೋಪಿಸಿಕೊಂಡು ಹೊರಟು ಹೋದನೋ?

ಗುರುನಾಥರಾಯ:—ಇಲ್ಲ; ತಾನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆಯಾಯಿತೆಂದೂ, ಇನ್ನು ಮುಂದೆ ಇಂತಹ ತಪ್ಪುಮಾಡಲು ಅವಕಾಶವಾಗದಂತೆ ಎಚ್ಚರಿಕೆಯನ್ನುಂಟು ಮಾಡಿ ತನಗೆ ಒಳ್ಳೆಯದನ್ನೇ ಮಾಡಿದಿರೆಂದೂ ನನ್ನನ್ನು ಹೊಗಳಿ ಸಂತೋಷದಿಂದ ಹೊರಟು ಹೋದನು.

ನರಸಿಂಗ:—ರಾಯರೇ, ಈತನ ಬರವಣಿಗೆಯು ಮನರಂಜಕವಾಗಿದೆ. ನನಗೀ ಬರಹದಲ್ಲಿ ತುಂಬಾ ಪ್ರೀತಿಯುಂಟಾಗಿದೆ. ದಯವಿಟ್ಟು ಈತನು ನಿಮ್ಮಲ್ಲಿ ಬರೆದ ಕಾಗದಗಳಿದ್ದರೆ ಮಾದರಿಗಾಗಿ ನನಗೊಂದೆರಡು ಕೊಡುವಿರಾ?

ಗುರುನಾಥರಾಯನು ಸಂತೋಷದಿಂದ:—ಆಗಲಿ, ಎಂದು ದಪ್ತರನನ್ನು ಬಿಚ್ಚಿ, ಅದರೊಳಗಿದ್ದ ಸದಾಶಿವನು ಬರೆದ ಕಾಗದಗಳಲ್ಲಿ ಎರಡು ಉತ್ತಮವಾದವುಗಳನ್ನು ಆರಿಸಿ ನರಸಿಂಗರಾಯನಿಗೆ ಕೊಟ್ಟನು.

ಅಷ್ಟರಲ್ಲಿ ಸೇವಕನು ಕಾಫಿಯನ್ನು ತಂದು ಇಟ್ಟನು. ಇಬ್ಬರೂ ಕುಡಿದರು. ಅನಂತರ ನರಸಿಂಗರಾಯನು:-ನಾನು ಬಂದ ಸುದ್ದಿಯನ್ನು ಗೌಪ್ಯದಲ್ಲಿ ಇರಲಿ, ಎಂದು ಹೇಳಿ ಅಪ್ಪಣೆ ಪಡೆದು ಹೊರಟು ಹೋದನು.

---

## ( ೭ )

ಸಾಯಂಕಾಲದ ಸಮಯವು. ಸದಾಶಿವನು ಯಜಮಾನನ ಮನೆಯಲ್ಲಿ ತನ್ನ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ಮನೆಗೆ ಬಂದಿದ್ದನು. ಅದೇ ವೇಳೆಗೆ ಒಬ್ಬ ಹಳ್ಳಿಯ ಮನುಷ್ಯನು ಅಲ್ಲಿಗೆ ಬಂದು:—ಇದೇ ಸದಾಶಿವಯ್ಯನವರ ಮನೆಯೋ? ಎಂದು ಜಗುಲಿಯ ಮೇಲೆ ನಿಂತಿದ್ದ ಸದಾಶಿವನನ್ನು ಕೇಳಿದನು.

ಅದಕ್ಕೆ ಸದಾಶಿವನು:—ಹೌದು! ಆದರೆ ಯಾವ ಸದಾಶಿವಯ್ಯನವರು?

ಹಳ್ಳಿಯ ಮನುಷ್ಯ:—ಸೋಮಪುರದ ಗುರುನಾಥರಾಯರ ಮನೆಯಲ್ಲಿ ಇದ್ದರಲ್ಲಾ! ಆ ಸದಾಶಿವಯ್ಯನವರು.

ಸದಾಶಿವ:—ಅಹುದು! ಇದು ಅದೇ ಸದಾಶಿವಯ್ಯನ ಮನೆಯು, ನಾನೇ ಆ ಸದಾಶಿವಯ್ಯನು! ನನ್ನಿಂದ ನಿಮಗೇನಾಗಬೇಕು? ನಿಮಗೆ ಯಾವ ಊರು?

ಹಳ್ಳಿಯ ಮನುಷ್ಯ:— (ಆಶ್ಚರ್ಯವನ್ನು ನಟಿಸುತ್ತ) ನೀವೇಯೋ ಸದಾಶಿವಯ್ಯನವರು! ನನಗೆ ತಮ್ಮ ಗುರುತಿಲ್ಲ. ನನ್ನದು ಸುರವಳ್ಳಿ. ತಾವು ಬರವಣಿಗೆಯಲ್ಲಿ ತುಂಬಾ ಗಟ್ಟಿಗರೆಂದು ಕೇಳಿರುವೆನು. ಈಗ ನನಗೊಂದು ಅರ್ಜಿಯನ್ನು ಬರೆಕೊಡಬೇಕು. ಅದಕ್ಕಾಗಿ ತಮ್ಮ ಬಳಿಗೆ ಬಂದಿರುವೆನು.

ಸದಾಶಿವಯ್ಯನು:—ಆಗಲಿ! ಒಳಕ್ಕೆ ಬನ್ನಿ, ಎಂದು ಆಗಂತುಕನನ್ನು ಒಳಗೆ ಕರೆದುಕೊಂಡು ಹೋಗಿ ಒಂದು ಖುರ್ಚಿಯ ಮೇಲೆ ಕುಳ್ಳಿರಿಸಿ, ಲೇಖನ ಸಾಮಗ್ರಿಗಳನ್ನು ತೆಗೆದುಕೊಂಡು ಬಂದು ಕುಳಿತನು.

ಹಳ್ಳಿಯವನು ಅರ್ಜಿಯ ಸಂಗತಿಗಳನ್ನೆಲ್ಲ ಹೇಳಿದನು. ಸದಾಶಿವನು ಎಲ್ಲ

ಸಂಗತಿ ಕೇಳಿ, ಅಚ್ಚುಕಟ್ಟಾಗಿ ಬರೆದು, ಆತನ ಕೈಗೆ ಕೊಟ್ಟನು. ಅದನ್ನು ತೆಗೆದುಕೊಂಡು ಆ ಹಳ್ಳಿಯ ಮನುಷ್ಯನು ಸಂತೋಷವನ್ನು ಸೂಚಿಸುತ್ತ:— ಸ್ವಾಮಿಾ, ಬಹಳ ಚನ್ನಾಗಿ ಬರೆದು ಕೊಟ್ಟಿರುವಿರಿ. ಇದುವರೆಗೆ ಯಾರೂ ಇಷ್ಟು ಅಂದವಾಗಿಯೂ, ಅಚ್ಚುಕಟ್ಟಾಗಿಯೂ ಬರೆದು ಕೊಟ್ಟವರನ್ನು ನಾನು ನೋಡಲಿಲ್ಲ. ಇದನ್ನು ಬರೆದು ಕೊಟ್ಟುದಕ್ಕೆ ಏನು ಕೊಡಬೇಕು?

ಅಷ್ಟರಲ್ಲಿ ಇನ್ನೊಬ್ಬ ವ್ಯಕ್ತಿಯು ಅಲ್ಲಿಗೆ ಬಂದನು. ಆತನನ್ನು ನೋಡಿ ಸದಾಶಿವನು ಸಂತೋಷವನ್ನು ಸೂಚಿಸುತ್ತಾ:—ರಘು, ಬಾ ಕುಳಿತುಕೋ! ವಿಶೇಷವೇನು? ಎಂದನು. ರಘುವು ಕುಳಿತುಕೊಂಡು:—

ವಿಶೇಷವೇನೂ ಇಲ್ಲ. ಹಳ್ಳಿಯವನನ್ನು ನೋಡಿ ಇವನಾರು?

ಸದಾಶಿವ:—ಇವರು ಇಲ್ಲಿಯೇ ಹಳ್ಳಿಯವರು. ಒಂದು ಅರ್ಜೀ ಬರಿಸಬೇಕಾಗಿತ್ತಂತೆ, ಬಂದಿದ್ದರು. ಏನೋ! ನಿಮ್ಮ ಯಜಮಾನರಿಗೆ ಇನ್ನೂ ಭ್ರಾಂತಿಯು ಹೋಗಿಲ್ಲನ್ನೋ? ನಾನೆಷ್ಟು ವಿಧವಾಗಿ ಧೈರ್ಯ ಹೇಳಿದರೂ ಅದು ಅವರಿಗೆ ನಂಬಿಕೆಯಾಗುವದಿಲ್ಲ. (ಹಳ್ಳಿಯವನನ್ನು ಕುರಿತು) ಸ್ವಾಮಿಾ, ಎಂಟಾಣೆ ಕೊಡಿರಿ, ಎಂದನು. (ಹಳ್ಳಿಯವನು ಎಂಟಾಣೆಯನ್ನು ತೆಗೆದು ಸದಾಶಿವನಿಗೆ ಕೊಟ್ಟನು.)

ರಘು:—ಈಗ ಅದಕ್ಕಾಗಿಯೇ ನಿಮ್ಮ ಬಳಿಗೆ ನನ್ನನ್ನು ಕಳಿಸಿರುವರು. ನೀವು ಈಗಲೇ ಬಂದು ಹೋಗಬೇಕಂತೆ.

ಸದಾಶಿವ:—ನೀವೂ ಅವರ ಹೇಳಿಕೆಯಂತೆಯೇ ನಡೆಯುತ್ತಿರುವಿರಲ್ಲ! ನೀವು ಅವರಿಗೆ ತಕ್ಕ ಧೈರ್ಯವನ್ನು ಹೇಳಿ ಸಮಾಧಾನಪಡಿಸಬಾರದೇ?

ರಘು:—ಏನು ಮಾಡುವದು? ನೀವು ಕುಳಿತಲ್ಲಿಯೇ ಸಂಪಾದಿಸುವಿರಿ. ಈಗ ನೋಡಿ, ನನ್ನ ಕಣ್ಣೆದುರಿಗೇ ಎಂಟಾಣೆಯನ್ನು ಜೇಬಿಗಿಳಿಸಿದಿರಿ. ನಮ್ಮ ಸ್ಥಿತಿಯು ಹಾಗೇನು? ಧಣಿಯು ಹೇಳಿದಂತೆ ಕೇಳಿಕೊಂಡು ನಡೆದರೆ ನಮಗೊಂದು ತುತ್ತು ಕೂಳು! ಅದಿಲ್ಲದಿದ್ದರೆ ಭವತೀ ಭಿಕ್ಷಾಂ ದೇಹಿ!

ಸದಾಶಿವ:—ಆಗಲಿ, ಈಗ ಬರುತ್ತೇನೆ. (ಹಳ್ಳಿಯವನನ್ನು ನೋಡಿ) ಅಯ್ಯಾ, ತಾವಿನ್ನು ಹೊರಡಬಹುದು. (ಹಳ್ಳಿಯವನು ಹೊರಟು ಹೋದನು.)

ಸ್ವಲ್ಪ ಹೊತ್ತಿನಲ್ಲಿ ಸದಾಶಿವನೂ ರಘುವೂ ಊರಾಚೆಯಲ್ಲಿದ್ದ ಹಾಳು ದೇವಸ್ಥಾನದ ದಾರಿಯನ್ನು ಹಿಡಿದು ಹೊರಟರು. ಇವರ ಹಿಂದುಗಡೆಯಲ್ಲಿಯೇ ಒಬ್ಬ ಹೊಲೆಯನೂ ಹೊರಟನು. ಆ ಹೊಲೆಯನಾರೆಂಬದು ನಮಗೆ ತಿಳಿ

ಯಿದು. ಆತನು ಒಂದು ಹರಕು ಸಣ್ಣ ಪಂಚೆಯನ್ನು ಸೊಂಟಕ್ಕೆ ಸುತ್ತಿಕೊಂಡು ಹೊಲಿಸಿನಿಂದ ಕೂಡಿದ ಒಂದು ಹರಕು ಅಂಗಿಯನ್ನು ಹಾಕಿಕೊಂಡಿದ್ದನು. ಆತನ ಬಗಲಲ್ಲಿ ದೊಡ್ಡದಾದ ಒಂದು ಎಲೆ-ಅಡಿಕೆಯ ಚೀಲವಿತ್ತು. ಆತನು ಮೈಮೇಲೆ ಒಂದು ಕಂಬಳಿಯನ್ನು ಕೊಪ್ಪೆಮಾಡಿ ಹಾಕಿಕೊಂಡಿದ್ದು, ಕೈಯ ಲ್ಲೊಂದು ದೊಣ್ಣೆಯನ್ನು ಹಿಡಿದುಕೊಂಡಿದ್ದನು. ಹೊಲೆಯನ ಹಾವ-ಭಾವ ಗಳನ್ನು ನೋಡಿದರೆ ಆತನು ಹೆಂಡವನ್ನು ಕುಡಿದವನಂತಿದ್ದನು. ಸದಾಶಿವನೂ ರಘುವೂ ಮುಂದೆ ಮುಂದೆ ಹೋಗುತ್ತಿದ್ದ ಹಾಗೆಲ್ಲಾ ಹೊಲೆಯನೂ ಅವರನ್ನು ಹಿಂಬಾಲಿಸುತ್ತ ಹೋಗುತ್ತಿದ್ದನು. ಮದ್ಯದ ಅಮಲಿನಿಂದ ಕೆಂಪೇರಿದ ಕಣ್ಣು-ಳ್ಳವನಾಗಿ ಏನೇನೋ ಅಸಂಬದ್ಧ ಪದಗಳನ್ನು ಹೇಳುತ್ತಾ, ಕುಣಿಯುತ್ತಾ ಹೋಗುತ್ತಿದ್ದನು. ಊರು ದಾಟಿದನಂತರ ರಘುವು ಸದಾಶಿವನನ್ನು ಕುರಿತು:—

ಆನೆಯನ್ನು ಹುಡುಕಲು ಸಿಂಹವು ಬಂದಿರುವುದಂತೆ; ಅದನ್ನು ಕೇಳಿ ಯಜಮಾನರು ಗಾಬರಿಗೊಂಡು ತಮ್ಮನ್ನು ಬರಹೇಳಿರುವರು, ಎಂದನು.

ಈ ವರಿಗೂ ಸ್ವಲ್ಪ ದೂರದಲ್ಲಿ ಬರುತ್ತಿದ್ದ ಹೊಲೆಯನು ಇವರು ಮಾತ ನಾಡುವದನ್ನು ಕೇಳಿ ಇವರ ಸಮೀಪಕ್ಕೆ ಬಂದನು.

ರಘುವಿನ ಮಾತಿಗೆ ಸದಾಶಿವನು:—ಆನೆಯನ್ನು ಹಿಡಿಯಲು ಅಂತಹ ಸಿಂಹವು ಯಾವದಿರುವದು? ಛಿ! ನಿಮಗೆ ಈ ಪೊಳ್ಳುಮಾತನ್ನು ಯಾರು ಹೇಳಿದರು? ಎಲ್ಲಾ ಸುಳ್ಳು!

ರಘು:—ಸುಳ್ಳಲ್ಲ! ಸಿಂಹವು ಬಂದಿರುವದು ನಿಜ; ರಜಕನು ಸಿಂಹವನ್ನು ನೋಡಿ ಬಂದಿರುವನಂತೆ. ಎಲ್ಲಾ ವಿಷಯಗಳೂ ಬಿಡದಿಯಲ್ಲಿ ತಮಗೆ ವಿಶದ ವಾಗಿ ತಿಳಿಯುವುದು.

ಸದಾಶಿವ:—ಏನು? ರಜಕನು ಸಿಂಹವನ್ನು ನೋಡಿರುವನೋ? ಎಲ್ಲಿ ನೋಡಿದನಂತೆ?

ರಘು:—ಅದೆಲ್ಲಾ ನನಗೆ ಗೊತ್ತಿಲ್ಲ. ಯಜಮಾನರು ಇವಿಷ್ಟು ಮಾತನ್ನು ಮಾತ್ರ ತಮ್ಮೊಡನೆ ಹೇಳಿ ತಮ್ಮನ್ನು ಕರೆದುಕೊಂಡು ಬರುವಂತೆ ಆಜ್ಞಾಪಿಸಿ ದ್ದಾರೆ. ನಿಮ್ಮ ಮನೆಯೊಳಗೇ ಇದನ್ನು ನಿಮಗೆ ಹೇಳಬೇಕೆಂದಿದ್ದರೂ ಆಗ ಅಲ್ಲಿ ಬೇರೆಯವರು ಇದ್ದದ್ದರಿಂದ ಹೇಳಲಿಲ್ಲ.

ಅಷ್ಟರಲ್ಲಿ ಹೊಲೆಯನು ಪದವನ್ನು ಹೇಳಲು ಪ್ರಾರಂಭಿಸಿದನು,

ಹ ಹ್ಹ ಹ್ಹ ಹ್ಹಾ ಸಟಪಟೀ ನಾನು | ಪಟೆಯಾಡುವವನಲ್ಲಾ ||

ಹ್ಹ ಹ್ಹ ಹ್ಹ ಔದ್ದು ನಾನ್ ಸುಳ್ಳೇಳೋನಲ್ಲ|

ಸಣ್ಣನುಸಿಯೊಂದು ಮದಲೆಯ ಬಡಿವ್ರೋದ ಕಂಡೇ|

ಸಣ್ಣ ಮುತ್ತಿಗೊಂದು ಸಣಬಿನದಾರ|ಸಣ್ಣ ಇರುವೇಯುಸುರಿವ್ರೋದಕಂಡೆ|

ಹಾ ಹಾ ಹಾ ಹ ಹ್ಹ ಹ್ಹ ಹ್ಹಾ|

ಹೊಲೆಯನ ಪದವನ್ನು ಕೇಳಿ ಇದುವರೆಗೂ ಯಾವನೋ ಒಬ್ಬ ಹೆಂಡ ಕುಡಿದ ಹೊಲೆಯನೆಂದು ಉದಾಶೀನದಿಂದ ಮುಂದೆ ಹೋಗುತ್ತಿದ್ದ ಸದಾಶಿವನಿಗೆ ಸ್ವಲ್ಪ ವಿನೋದ ಮಾಡಬೇಕೆಂದು ಮನಸ್ಸಾಗಿ ಹೊಲೆಯನನ್ನು ಕುರಿತು—

ಎಲೋ! ನೀನಾರು!

ಹೊಲೆಯ:—(ವಿನಯದಿಂದ ಕೈಮುಗಿಯುತ್ತಾ)ಪಾದ್ಕೆ ಬಿದ್ದೆ ಬುದ್ಧೀ! ನನ್ಗೇ ಊರು! ಊರು ಆ ಹಾಳು ದೇವಸ್ತಾನ್ವೈತಲ್ಲ ಬುದ್ಧೀ ಅದ್ರಿಂದೆ ಒಂದೂರೈತಲ್ಲ. ಅಲ್ಲೇ ನನ್ಗೆ ನನ್ ಹೆಸ್ರು ಗೋಲ್ಮಾದಾರ.

ಸದಾಶಿವ:—ಈಗ ಎತ್ತ ಕಡೆ ಹೋಗಿದ್ದೆ?

ಹೊಲೆಯ:—ಬುದ್ಧೀ! ಸ್ವಾನೇ! ನಾನ್ ಓಗಿದ್ದೆ ಸಾರಾಯಂಗಡ್ಗೆ. ಅಲ್ ಬುದ್ಧೀ! ಆ ಸಾರಾಯ್ಮಾರ್ತಾನ್ಲಾ? ಆ ಮಾದ್ರಚೋದ್ ಬಡ್ಡೀಮಗ ಸಣ್ಣಣ್ಣ! ಸಾರಾಯ್ಗೆ ಪೂರಾ ನೀರ್ ಬೆರ್ಸ್ಕೊಡ್ತಾನೇ! ಏನ್ ಹೇಳೋದು ಬುದ್ಧೀ! ನಮ್ಮಂತಾ ಬಡ್ಹೋದೀಮಕ್ಳು ಎಲ್ಲಾದ್ರೂ ಒಂದಪಾ ಕುಡ್ಕೊಂಡ್ ಬರಾಣ ಅಂತ್ ಬಂದ್ರೆ ಈ ನೀರು ಸಾರ್ನ್ಯಾ ಕುಂಡ್ಕಂಡೋಗಬೇಕ್ಲಾ! ಆದಿರ್ಲಿ ಅಯ್ ತಮ್ಗೆಲ್ಲಿ?

ಸದಾಶಿವ:—ನಮಗೆ ಇಲ್ಲಿಯೇ ಸಮೀಪ. ನೀನು ಒಳ್ಳೆಯ ಪದವನ್ನು ಹೇಳುತ್ತೀಯಾ? ಎಲ್ಲಿ ಒಂದು ಪದವನ್ನು ಹೇಳು ನೋಡೋಣ?

ಹೊಲೆಯ:—ಬುದ್ಧೀ! ನಂಗ್ಪದ ಬರ್ದು ಎಲ್ಲೋ ನಿಮ್ಮಂತೋರೇಳು ದ್ಕೇಳ್ಕಂಡು ಚೂರ್ಪಾರ್ ಕಲ್ತೀನಿ! ನೋಡ್ ನಮ್ಗೆ ಕಳ್ಳಮ್ಮೈತಲ್ಲಾ ಅದ್ರ ಪದಾ ಹೇಳ್ತೀನಿ!

"ಈಚಾಲ ಮರದವ್ವಾ! ನಮ್ಮವ್ವಾ! ಹ!ಹ!ಹ್ಹಾ! ಈಚಾಲ ಮರದವ್ವಾ ಆ ಕಾಸೂ ಕೊಟ್ಟವರಿಗೆ! ನಮ್ಮವ್ವಾ! ಕೈಲಾಸ ತೋರಸ್ತಾಳೇ ಹ್ಹಾ ಹ್ಹಾ ಹ್ಹಾ! ನೋಡ್ ಬುದ್ಧಿ ನಮ್ಮೆಂಡದ್ಮಾತ್ಮೆ! ಎಂಡಾವ ಕುಡಿಬೇಕು! ಓಬುದ್ಧೀ! ಎಂಡಾವ ಕುಡಿಬೇಕೂ!ಎಂಡಾವ ಕುಡಿದಿದ್ರೆ| ಗಂಡಾಸರೇನ್ ಬುದ್ಧಿ! ಎಂಡಾವ ಕುಡಿಬೇಕೂ ಅಣ್ಣ ಕೈಕಾಟ್ಗಾಗ! ಮೂರ್ರೂಪಾಯ್ ಸಂಬ್ಳದಾಗೆ! ಎಂಡಾವ ಕುಡಿಬೇಕು!"

ಬುದ್ಧೀ! ಎಂಡಾದ್ಮಾತ್ಮೆ ಇನ್ನೂ ಐತೆ; ಏಟೇಳ್ದ್ರೂ ತೀರಾದಿಲ್ಲ. ಅಯ್ ಇನ್ನೊಂದ್ಪದಾ ಹೇಳ್ಲಾ?

ಸದಾಶಿವ:—ಸಾಕು! ಸಾಕು! ನೀನು ಬಹಳ ಚನ್ನಾಗಿ ಪದಾ ಹೇಳ್ತೀಯಾ.

ಹೊಲೆಯ:—ಅಲ್ರಾ ಬುದ್ಧೀ, ಅಂದ್ರು ದಿನ ಆ ಸೋಂಪುರ್ದ ಗುರಾ್ರಯನ್ಮನೇಲಿ ಯಾರೋ ಕಳ್ರು ಕದ್ಕಂಡು ಓದ್ರಂತಲ್ಲಾ? ಯಾರಂತ್ಗೊತ್ತಾತಾ ಬುದ್ಧೀ?

ಸದಾಶಿವ:—ಇಲ್ಲಾ ಕಾಣೋ! ಅಲ್ಲೋ! ನಮಗ್ಯಾಕೆ ದೊಡ್ಡವರ ಮನೇ ಸುದ್ದಿ?

ಹೊಲೆಯ:—ಅದ್ಸರಿ ಕಂಡ್ರಾ! ನಮಗ್ಯಾಬ್ಯೆಡ ಸುದ್ದಿ! ಅಲ್ಲಾ! ನಿಮ್ಮ ತ್ರೇನೋ ಕೇಳ್ದೆ! ಆಟ್ಯೇ!

ಅಷ್ಟು ಹೊತ್ತಿಗೆ ಆ ಮೂವರೂ ಒಂದು ಹಾಳು ದೇವಸ್ಥಾನದ ಬಳಿಗೆ ಬಂದರು. ರಘುವು ಮುಂದೆ ಹೋಗಿ ಬಾಗಿಲು ತಟ್ಟಿದನು. ಒಳಗಿನಿಂದ ಒಬ್ಬನು ಬಂದು ಬಾಗಿಲು ತೆರೆಯಲು ಸದಾಶಿವನೂ, ರಘುವೂ ಒಳಕ್ಕೆ ಹೋದರು.

ಹೊಲೆಯ:—ಅಯ್, ಪಾಡ್ಕಿಬ್ಡೇ! ಓತೀನಿ ಎಂದು ಅಲ್ಲಿದ್ದ ಮರಗಳ ಗುಂಪಿನಲ್ಲಿ ಮರೆಯಾದನು.

ಪ್ರಿಯವಾಚಕ ಮಹಾಶಯ! ಸದಾಶಿವನ ಬಳಿಗೆ ಬಂದ ಹಳ್ಳಿಯ ಮನುಷ್ಯನೂ, ಈ ಹೊಲೆಯನೂ ಯಾರೆಂದು ತಾವು ಸಂಶಯಪಡುತ್ತಿರಬಹುದು. ಇವರಿಬ್ಬರೂ ಬೇರೆ ಯಾರೂ ಆಗಿರದೆ ನಮ್ಮ ನರಸಿಂಗರಾಯನೇ ಆಗಿದ್ದನು. ಗುರುನಾಥರಾಯನ ಮನೆಯಲ್ಲಿ ಸದಾಶಿವನ ವೃಂತಾಂತವನ್ನು ಕೇಳಿ, ಹಾಗು ಸದಾಶಿವನ ಹಸ್ತಾಕ್ಷರದ ಪತ್ರಗಳನ್ನು ನೋಡಿ ನರಸಿಂಗರಾಯನಿಗೆ ಸದಾಶಿವನ ಮೇಲೆ ಸಂಶಯವು ಹುಟ್ಟಿ, ಸದಾಶಿವನ ಪರೀಕ್ಷೆಗಾಗಿ ಆತನು ಹಳ್ಳಿಯವನ ವೇಷದಿಂದ ಬಂದಿದ್ದನೆಂದು ಬೇರೆ ಬರೆಯಲವಶ್ಯವಿಲ್ಲ. ಹಾಗೆಯೇ ಸದಾಶಿವನಲ್ಲಿಗೆ ರಘುವು ಸದಾಶಿವನನ್ನು ಕರೆದುಕೊಂಡು ಹೋಗುವದಕ್ಕಾಗಿ ಬಂದಿರುವುದನ್ನು ನೋಡಿ ಬೇಗನೆ ಹೊರಟು ಅಲ್ಲಿಯೇ ಒಂದು ಸಂದಿನಲ್ಲಿ ಹೊಲೆಯನ ವೇಷವನ್ನು ಧರಿಸಿಕೊಂಡು ಮೇಲೆ ಹೇಳಿದಂತೆ ಅವರಿಬ್ಬರನ್ನೂ ಹಿಂಬಾಲಿಸಿದನು.

ಸದಾಶಿವ-ರಘುವು ಒಳಕ್ಕೆ ಹೋದೊಡನೆಯೇ ಪುನಃ ಬಾಗಿಲು ಹಾಕಲ್ಪಟ್ಟಿತು. ಕೂಡಲೆ ಮರಗಳ ಮರೆಯಲ್ಲಿ ಮಾಯವಾದ ಆ ಹೊಲೆಯನು ಮೆಲ್ಲಗೆ

ದೇವಸ್ಥಾನದ ಒಳಗೆ ಬಂದು, ಒಳಗಿನಿಂದ ಮಾತು ಕೇಳಿ ಬರುವ ಕಡೆಯಲ್ಲಿ ಹೊಂಚುಹಾಕಿ ಕುಳಿತನು.

———

( ೮ )

ರಾಮಪುರದ ಹೊರಗಡೆಯಲ್ಲಿ ಒಂದು ಪ್ರಾಚೀನ ದೇವಾಲಯವಿದ್ದಿತು. ಇತ್ತೀಚೆಗೆ ಆ ದೇವಸ್ಥಾನದಲ್ಲಿ ಪೂಜೆ-ಪುನಸ್ಕಾರಗಳಿಲ್ಲದೆ ದೇವಾಲಯವು ತೀರಾ ಮುರಕಳಿಗೆ ಬಂದಿತ್ತು. ಇದಲ್ಲದೆ ಅಲ್ಲಿ ಭೂತಗಳು ವಾಸಮಾಡುತ್ತವೆಂದು ಸುದ್ದಿ ಹುಟ್ಟಿದ್ದರಿಂದ ಅಂಜಿ ಜನರೆಲ್ಲರೂ ಆ ದೇವಾಲಯದ ಬಳಿಗೆ ಸಹ ಹೋ-ಗುತ್ತಿರಲಿಲ್ಲ. ಹಿಂದಿನ ಪರಿಚ್ಛೇದದ ಕೊನೆಯಲ್ಲಿ ರಘುವೂ-ಸದಾಶಿವನೂ ಹೊಕ್ಕ ದೇವಾಲಯವು ಈ ದೇವಾಲಯವೇ ಆಗಿದ್ದಿತು. ಈ ನಿರ್ಜನವೂ, ಭಯಂಕರವೂ ಆದ ದೇವಾಲಯದೊಳಗೆ ಇತ್ತೀಚೆಗೆ ಯಾರೋ ಮನುಷ್ಯರು ವಾಸಮಾಡುತ್ತಿದ್ದರು. ಅವರಾರೆಂಬದನ್ನು ನಮ್ಮ ವಾಚಕರು ಆಗಲೇ ಊಹಿಸಿರಬಹುದು, ಇರಲಿ.

ಸದಾಶಿವನು ಒಳಗೆ ಬಂದೊಡನೆಯೇ ಒಬ್ಬ ಭವ್ಯಶರೀರದ ಮನುಷ್ಯನು ಮುಂದೆ ಬಂದು ಅವನಿಗೆ ಹಸ್ತಲಾಘವವನ್ನಿತ್ತು:--ಬನ್ನಿ, ಸದಾಶಿವಯ್ಯನವರೇ, ಎಂದು ಆತನನ್ನು ಕರೆದುಕೊಂಡು ಆ ದೇವಾಲಯದ ಕೈ-ಸಾಲೆಯಲ್ಲಿದ್ದ ಒಂದು ಕೋಣೆಗೆ ಹೋದನು, ಅವರ ಹಿಂದೆ ರಘುವೂ ಹೋದನು. ಅಲ್ಲಿ ಇನ್ನಿಬ್ಬರು ಕುಳಿತಿದ್ದರು. ಸದಾಶಿವನು ಬಂದೊಡನೆಯೇ ಅವರಿಬ್ಬರೂ ಎದ್ದು ಸದಾಶಿವನಿಗೆ ವಂದಿಸಿದರು. ಸದಾಶಿವನು ಅವರೆಲ್ಲರಿಗೂ ವಂದಿಸಿದ ಬಳಿಕ ಆ ಐವರೂ ಅಲ್ಲಿ ಹಾಸಿದ್ದ ಕಂಬಳಿಯ ಮೇಲೆ ಕುಳಿತುಕೊಂಡರು. ಆಗ ಆ ಭವ್ಯಶರೀರದ ಮನುಷ್ಯನು ಸದಾಶಿವನನ್ನು ಕುರಿತು:—

ಸದಾಶಿವಯ್ಯನವರೇ, ನಿಮ್ಮ ಹೇಳಿಕೆಯಂತೆ ನಾವೇನೋ ಪ್ರಸಿದ್ಧ ರೀತಿಯಿಂದ ಕಳವು ಮಾಡಿಬಿಟ್ಟೆವು. ಈಗ ಅದು ಪೀಕಲಾಟಕ್ಕೆ ಬಂದಿದೆ; ಏನು ಮಾಡೋಣ?

ಸದಾಶಿವ:—ಮಿತ್ರರಾದ ವೀರಪ್ಪನವರೇ, ನೀವೇಕೆ ಇಷ್ಟು ಕಳವಳಗೊಳ್ಳುತ್ತಿರುವಿರಿ? ಹೆದರುವಂತಹ ಪ್ರಸಂಗವಾದರೂ ಏನು ಬಂದಿದೆ?

ವಾಚಕವರ! ವೀರಪ್ಪನು ಆ ಚೋರ ಕೂಟದ ಮುಖ್ಯಸ್ಥನು. ಸದಾಶಿವನ ಮಾತಿಗೆ ವೀರಪ್ಪನು:—ಮಿತ್ರರೇ, ನೀವೇನೋ ಧೈರ್ಯವಾಗಿರುವಿರಿ; ಆದರೆ, ನನಗೇಕೋ ಭಯವಾಗುತ್ತದೆ, ನಾವಿಂದು ಒಂದು ಹೊಸ ವಿಷ

ಮಾನವನ್ನು ಕೇಳಿರುವೆನು. ಅದರಿಂದ ನನ್ನ ಭಯವು ಹೆಚ್ಚಾಗಿದೆ. ನಮ್ಮ ಕಳುವನ್ನು ಪತ್ತೆಹಚ್ಚಿ, ನಮ್ಮನ್ನು ಹಿಡಿಯಲು ಪ್ರಸಿದ್ಧ ಪತ್ತೇದಾರ ನರಸಿಂಗ ರಾಯನು ಬಂದಿರುವನಂತೆ ಈ ವರ್ತಮಾನವನ್ನು ನೀವು ಕೇಳಿಲ್ಲವೋ?

ಸದಾಶಿವ:—ದಾರಿಯಲ್ಲಿ ರಘುವು ಸ್ವಲ್ಪ ಸೂಚಿಸಿದನು; ಆದರೆ ನಾನೆಷ್ಟು ಮಾತ್ರಕ್ಕೂ ಈ ಮಾತನ್ನು ನಂಬಲಾರೆನು.

ವೀರಪ್ಪ:—ನಾನೂ, ಯಾರಾದರೂ ಈ ಮಾತನ್ನು ಹೇಳಿದ್ದರೆ ನಂಬು ತ್ತಿರಲಿಲ್ಲ; ಆದರೆ ನಮ್ಮ ರಜಕನೇ ನರಸಿಂಗರಾಯನು ಬಂದಿರುವದನ್ನು ನೋಡಿ ಬಂದಿರುವನಂತೆ. ಆದುದರಿಂದ ಹೆಚ್ಚು ಭಯಪಡುತ್ತಿರುವೆನು.

ಸದಾಶಿವ (ರಜಕನನ್ನು ಕುರಿತು):—ರಜಕ, ನೀನೆಲ್ಲಿ ನರಸಿಂಗರಾಯ ನನ್ನು ನೋಡಿದೆ? ಆತನು ಹೇಗಿದ್ದನು? ಆತನು ನರಸಿಂಗರಾಯನೇ ಎಂಬು ದನ್ನು ನೀನು ಹೇಗೆ ತಿಳಿದುಕೊಂಡೆ?

ರಜಕನು:—ನಾನೀ ದಿವಸ ಬೆಳಗ್ಗೆ ಈ ಊರ ಕೃಷ್ಣವಿಲಾಸ ಹೋಟಲ್ಲಿಗೆ ಹೋಗಿದ್ದೆನು. ಸುಮಾರು ಒಂಭತ್ತು ಘಂಟೆಯ ಸಮಯವಿರಬಹುದು. ಅಷ್ಟೊ ತ್ತಿಗೆ ಅಲ್ಲಿಗೆ ಒಬ್ಬ ಮನುಷ್ಯನು ಬಂದನು. ಆತನು ನೋಡುವದಕ್ಕೆ ಒಳ್ಳೆಯ ಲಕ್ಷಣವಾಗಿದ್ದಾನೆ. ವಯಸ್ಸು ಸುಮಾರು ೨೫-೩೦ ಆಗಬಹುದು. ಆತನು ಬಲಿಷ್ಟನಾಗಿದ್ದು, ಮೈಬಣ್ಣವು ಕಾದಗಪ್ಪಿನದು. ಆತನ ಮುಖದಲ್ಲಿ ಸುಂದರ ವಾದ ಮೀಸೆಯಿದೆ. ಅವನು ಒಂದವನೇ ಅಲ್ಲಿರುವ ಒಂದು ನಂಬರಿನ ಕೋಣೆ ಯೊಳಕ್ಕೆ ಹೋದನು. ಅವನನ್ನು ನೋಡಿ ನನಗೆ ಸಂಶಯ ಉಂಟಾಯಿತು. ಆಗ ನಾನು ಹೋಟೆಲ್ಲಿನ ಮ್ಯಾನೇಜರನನ್ನು ಕುರಿತು:—ಆತನು ಯಾರೆಂದು ಕೇಳಿದೆನು. ಅದಕ್ಕವನು:—ಇವರು ಯಾರೆಂಬದು ಗೊತ್ತಿಲ್ಲ. ತಾನು ಉತ್ತರದೇಶದವನೆಂದೂ, ದೇಶಸಂಚಾರಕ್ಕಾಗಿ ಇಲ್ಲಿಗೆ ಬಂದಿರುವನೆಂದೂ ತನ್ನ ಹೆಸರು ಶಂಕರನೆಂದೂ ಹೇಳಿರುವನು. ನಿನ್ನೆ ಇವನು ಕೋಣೆಯಲ್ಲಿಲ್ಲದಾಗ ಯಾರೋ ಇವನನ್ನು ಕಾಣುವದಕ್ಕಾಗಿ ಕೋಣೆಗೆ ಹೋಗಿರಲು, ಅಲ್ಲಿಯೊಂದು ಕಾಗದ ಬಿದ್ದಿತ್ತು. ಅದನ್ನು ತೆಗೆದುಕೊಂಡು ನೋಡಿದನು. ಅದರಲ್ಲಿ ಪತ್ತೇ ದಾರ ನರಸಿಂಗರಾಯ ಕೃಷ್ಣನಗರ, ಎಂದು ಬರೆದಿತ್ತು. ಆದರಿಂದ ಈತನು ನರಸಿಂಗರಾಯನಿರಬಹುದೆಂದೂ, ಗುರುನಾಥರಾಯರ ಮನೆಯ ಕಳುವಿನ ಪತ್ತೆಗಾಗಿಯೇ ಇತನು ಇಲ್ಲಿಗೆ ಬಂದು ಹೀಗೆ ಗುಪ್ತರೀತಿಯಿಂದ ಇರುತ್ತಿರುವ ನೆಂದೂ ಊಹಿಸಿರುವೆನು, ಎಂದು ನುಡಿದನು. ಅದಕ್ಕೆ ನಾನು ಅವನೊಡನೆ:—

ನಿಜವಾಗಿಯೂ ಈತನು ನರಸಿಂಗರಾಯನೇ ಇರಬಹುದೇ? ಎಂದು ಕೇಳಿದ್ದಕ್ಕೆ ಆ ವ್ಯಾನೇಜರನು ಹೀಗೆಂದನು;'' ಆದರೆ ನರಸಿಂಗರಾಯರೆಂದು ನಿಸ್ಸಂಶಯವಾಗಿ ಹೇಳಲಿಕ್ಕಾಗದು. ನರಸಿಂಗರಾಯರ ಮಿತ್ರರು ಇವರಿರಬಹುದು. ಮಿತ್ರತ್ವದ ನೆನಪಿಗಾಗಿ ತಮ್ಮ ಹೆಸರಿನ ಕಾರ್ಡನ್ನು ನರಸಿಂಗರಾಯರು ಇವರಿಗೆ ಕೊಟ್ಟಿರ ಬಹುದು,'' ನಾನೇನೋ ಇವರೇ ನರಸಿಂಗರಾಯರಿರಬಹುದೆಂದು ಊಹಿಸಿದೆನು ಅಷ್ಟೇ!'' ನಾನು ಹೆಚ್ಚಿಗೆ ಪ್ರಶ್ನೆ ಮಾಡಿದಲ್ಲಿ ವ್ಯಾನೇಜರನಿಗೆ ನನ್ನ ಮೇಲೇನಾ ದರೂ ಸಂಶಯ ಬರಬಹುದೆಂದು ತಿಳಿದು ಹಾಗೆಯೇ ಅಲ್ಲಿಂದ ಹೊರಟು ಬಂದೆನು. ನರಸಿಂಗರಾಯನು ನಮ್ಮನ್ನು ಹಿಡಿಯಬಂದಿರುವದು ನಿಜ.

ಸದಾಶಿವ:—ನನಗೇಕೋ ಈ ವಿಷಯದಲ್ಲಿ ವಿಶ್ವಾಸ ಹುಟ್ಟುವದಿಲ್ಲ. ನರ ಸಿಂಗರಾಯನು ಬಂದುದು ಸುಳ್ಳೆಂದು ನನ್ನ ಭಾವನೆಯಾಗಿದೆ. ನಾನು ಈ ವಿಷಯವನ್ನು ಪರೀಕ್ಷಿಸಿಯೇ ಬಿಡುವೆನು! ನನ್ನ ಅಭಿಪ್ರಾಯವನ್ನು ನೀವೆಲ್ಲರೂ ಒಪ್ಪುವದಾದರೆ ನರಸಿಂಗರಾಯನು ಬಂದುದು ನಿಜವೋ! ಸುಳ್ಳೋ? ಎಂಬು ದನ್ನು ಗೊತ್ತು ಮಾಡುವೆನು.

ಎಲ್ಲರೂ:—ನಿಮ್ಮ ಅಭಿಪ್ರಾಯವೇನು ತಿಳಿಸಿರಿ.

ಸದಾ:—ನಾನೀಗ ಒಂದು ಪತ್ರವನ್ನು ಬರೆದು ಅದನ್ನು ಪೋಲೀಸ ಸುಪರಿಂಡೆಂಟ ಸಾಹೇಬರು ನೋಡಿ ನರಸಿಂಗರಾಯನಿಗೆ ತಲ್ಪಿಸುವದು ಎಂದು ಬರೆದು ಹಾಕುವೆನು. ಆ ಪತ್ರವು ನಾಳೆ ಬೆಳಗಿನ ಡಿಲೆವರಿಯಲ್ಲಿ ಸುಪ ರಿಂಡೆಂಟರಿಗೆ ತಲ್ಪುವದು. ಅವರು ಅದನ್ನು ನರಸಿಂಗರಾಯನಿಗೆ ತಲುಪಿಸ ಬೇಕಷ್ಟೇ? ನಾಳೆ ಬೆಳಿಗ್ಗೆ ನಮ್ಮವರಲ್ಲಿ ಒಬ್ಬರು ಸುಪರಿಂಟೆಂಟರ ಬಂಗ್ಲೆಯ ಬಳಿಯಲ್ಲಿ ಕಾದಿರಬೇಕು. ಮತ್ತೊಬ್ಬರು ಕೃಷ್ಣವಿಲಾಸ ಹೋಟೆಲ್ಲಿನ ಬಳಿ ಕಾದಿರಬೇಕು. ಸುಪರಿಂಡೆಂಟರು ತಮ್ಮಲ್ಲಿಗೆ ಬಂದ ಆ ಪತ್ರವನ್ನು ಯಾರಾ ದರೂ ಜವಾನರ ಹತ್ತಿರ ಕೊಟ್ಟು ನರಸಿಂಗರಾಯನಿಗೆ ಕಳಿಸಬಹುದು. ಆಗ ಅಲ್ಲಿ ಕಾದಿರುವ ನಮ್ಮವರು ಆ ಜವಾನನ್ನು ಹಿಂಬಾಲಿಸಿ ಆ ಪತ್ರವನ್ನು ಆತನು ಯಾರಿಗೆ ಕೊಡುವನೆಂಬದನ್ನು ನೋಡಿಕೊಂಡು ಆ ಮನುಷ್ಯನನ್ನು ಗುರು ತಿಟ್ಟುಕೊಂಡು ಬರಲಿ. ಒಂದು ವೇಳೆ ಬಂಗ್ಲೆಯ ಬಳಿಯಿರುವ ನಮ್ಮವರಿಗೆ ತಿಳಿಯದಂತೆ ಜವಾನನು ಹೋದರೆ ಹೋಟೆಲ್ಲಿನಲ್ಲಿಯೇ ನರಸಿಂಗರಾಯನು ಇರುವದು ನಿಜವಾದರೆ ಆತನು ಅಲ್ಲಿಗೇ ಹೋಗುವವನಷ್ಟೆ? ಆಗ ಅಲ್ಲಿರುವ ನಮ್ಮವನು ನರಸಿಂಗರಾಯನನ್ನು ಗುರುತಿಸಿಕೊಂಡು ಬರತಕ್ಕದ್ದು.

ಈ ಉಪಾಯದಿಂದ ನರಸಿಂಗರಾಯನು ಬಂದಿರುವದೂ, ಬಾರದಿರು ವದೂ ಗೊತ್ತಾಗುವದು.

ಎಲ್ಲರೂ:—(ಸಂತೋಷದಿಂದ) ನಿಮ್ಮ ಅಭಿಪ್ರಾಯಕ್ಕೆ ನಾವೆಲ್ಲರೂ ಒಪ್ಪುವೆವು. ನಿಮ್ಮ ಬುದ್ಧಿವಂತಿಕೆಯು ಅಸಾಧಾರಣವಾದುದು. ಆ ಮೇಲೆ ಏನು ಮಾಡುವದು?

ಸದಾ:—(ಹೆಮ್ಮೆಯಿಂದ)ಆ ಮೇಲೆ? ನರಸಿಂಗರಾಯನು ಬಂದುದೇ ನಿಜವಾಗಿದ್ದರೆ ನಾಡದೇ ರಜಕನು ಕಾಳನನ್ನು ಜೊತೆಯಲ್ಲಿ ಕರೆದುಕೊಂಡು ಹಣವನ್ನು ತೆಗೆದುಕೊಂಡು ಕೃಷ್ಣನಗರಕ್ಕೆ ಹೋಗಿ ಅಲ್ಲಿ ನೋಟನ್ನೆಲ್ಲ ಮುರಿಸಿ ನಗದು ರೂಪಾಯಿಗಳನ್ನು ತೆಗೆದುಕೊಂಡು ಬರಲಿ, ಅಷ್ಟರಲ್ಲಿ ನಾವಿಲ್ಲಿ ಏನಾ ದರೂ ಉಪಾಯದಿಂದ ನರಸಿಂಗರಾಯನನ್ನು ಹಿಡಿದು ಆತನನ್ನು ಯಮಪುರಿ ಗಟ್ಟಿಬಿಡೋಣ. ಇಲ್ಲವೇ ನಿರ್ಬಂಧದಲ್ಲಿಟ್ಟುಬಿಡೋಣ. ನರಸಿಂಗರಾಯನು ಬಂದಿರುವದೇ ಸುಳ್ಳಾದರೆ ನಮಗೆ ಯಾವ ಭಯವೂ ಇಲ್ಲ. ರಜಕನು ಹಣ ವನ್ನು ತೆಗೆದುಕೊಂಡು ಇನ್ನೆರಡು ದಿನಗಳ ಮೇಲೆ ಹೋಗಲಿ! ಚಿಂತೆಯಿಲ್ಲ, ವೀರಪ್ಪನವರೇ ಆ ನೋಟಿನ ನಂಬರಿನ ಪುಸ್ತಕವನ್ನು ಸುಟ್ಟುಹಾಕಿದಿರಾ?

ವೀರಪ್ಪ:—ಇಲ್ಲ; ನಾಳೆಯೇ ಸುಡಿಸಿ ಹಾಕುವೆನು.

ಸದಾ:—ಜಾಗ್ರತೆ ಅದನ್ನು ಸುಡಿಸಿಬಿಡಿ! ಕೊನೆಗೆ ಅದರಿಂದಲೇ ಏನಾ ದರೂ ಗೋಳು ಬಂದೀತು. ನನ್ನ ಅಭಿಪ್ರಾಯವು ನಿಮಗೆ ಸಮ್ಮತವೋ ಹೇಗೆ?

ವೀರಪ್ಪ:—ಸದಾಶಿವಯ್ಯನವರೇ, ನಿಮ್ಮ ಅಭಿಪ್ರಾಯಕ್ಕೆ ಬದಲುಹೇಳಲು ನಾನು ಶಕ್ತನಲ್ಲ. ನನ್ನ ಭಯವನ್ನು ಹೋಗಲಾಡಿಸಿ ನಮ್ಮೀ ಕೃತ್ಯವು ಜಯ ಶಾಲಿಯಾಗುವಂತೆ ಮಾಡುವದು ನಿಮ್ಮ ಕರ್ತವ್ಯ.

ನಾಳೆ ರಜಕನು ಬಂಗ್ಲೆಯ ಬಳಿಯಲ್ಲಿ ಕಾದಿರಬೇಕೆಂದೂ, ರಘುವು ಹೋಟೆ ಲ್ಲಿನಲ್ಲಿ ಕಾದಿರಬೇಕೆಂದೂ ನಿಷ್ಕರ್ಷೆಯಾಗಿ ಸದಾಶಿವನು ಅಲ್ಲಿಯೇ ಒಂದು ಪತ್ರ ವನ್ನು ಬರೆದು ಜೇಬಿನಲ್ಲಿರಿಸಿಕೊಂಡು ಆ ಗುಪ್ತಗೃಹದಿಂದ ಹೊರಬಿದ್ದನು. ಹೋಗುವಾಗ ವೀರಪ್ಪನು:—ಮಿತ್ರರೇ, ಎಚ್ಚರಿಕೆ! ಪ್ರಮಾದಕ್ಕೊಳಗಾಗ ಬೇಡಿರಿ! ಜಾಗೃತರಾಗಿರಿ, ಎಂದು ಹೇಳಿದನು.

ಪ್ರಿಯ ವಾಚಕರೇ, ವೀರಪ್ಪನು ಕೊಲೆ ಸುಲಿಗೆಗಳಲ್ಲಿ ನಿಪ್ಣಾತನೇನೋ ಅಹುದು? ಆದರೆ ಆತನಿಗೆ ಧೈರ್ಯ ಕಡಿಮೆ. ಅವನು ಇದುವರೆಗೆ ಎಷ್ಟೋ ಕೊಲೆ-ಸುಲಿಗೆಗಳನ್ನು ಮಾಡಿದ್ದರೂ, ಇದುವರೆಗೂ ಹೀಗೆ ಪ್ರಸಿದ್ಧ ರೀತಿಯಿಂದ

ದಿಯಾವ ಕೃತ್ಯಗಳನ್ನೂ ಮಾಡಿರಲಿಲ್ಲ. ಅವನ ಕೃತ್ಯಗಳೆಲ್ಲವೂ ಕಾಡಿನಲ್ಲಿ ಗುಟ್ಟಾಗಿ ನಡೆಯುತ್ತಿದ್ದವು. ಸದಾಶಿವನ ಹೇಳಿಕೆಯಂತೆ ಈ ಸಾರೆ ಆತನು ಪ್ರಸಿದ್ಧ ರೀತಿಯಿಂದ ಕಳುವು ಮಾಡಿದ್ದನು. ಸದಾಶಿವನು ಹಟಮಾರಿಯು; ತನ್ನ ಹಟವೇ ಗೆಲ್ಲಬೇಕೆಂಬ ಸ್ವಭಾವದವನು; ಹಿಂದುಮುಂದಿನ ಯೋಚನೆಯಿಲ್ಲದವನು. ಇಂತವನ ಹೇಳಿಕೆಯಂತೆ ನಡೆದುದರಿಂದ ಯಾವ ಕಾಲಕ್ಕೆ ಏನು ಅಪಾಯ ಬರುತ್ತದೋ ಎಂದು ವೀರಪ್ಪನು ಚಿಂತಿಸುತ್ತಿದ್ದನು; ಹಾಗು ಸೂಪರಿಂಡೆಂಟರ ಚಾಹೀರು ಪ್ರಕಟಣೆ, ನರಸಿಂಗರಾಯನು ಒಂದ ವಾರ್ತೆ ಇವುಗಳನ್ನು ಕೇಳಿದಾಗಿನಿಂದ ವೀರಪ್ಪನ ಎದೆಯಲ್ಲಿ ಕುದಿಸಿ ಹುರಿದ ಭತ್ತವನ್ನು ಕುಟ್ಟಿದಂತಾಗುತ್ತಿತ್ತು. ಆತನು ಸದಾಶಿವನಿಗೆ ಎಚ್ಚರಿಕೆಯಿಂದಿರುವ ಹಾಗೂ, ಈ ಕೃತ್ಯವನ್ನು ಗುಪ್ತವಾಗಿಡುವ ಹಾಗೂ ಆಗಾಗ್ಗೆ ಹೇಳುತ್ತಿದ್ದನು; ಆದರೆ ಉದ್ದಾಮ ಸ್ವಭಾವದ ಸದಾಶಿವನು ಹೆಮ್ಮೆಯಿಂದ ವೀರಪ್ಪನ ಮಾತನ್ನು ಅಲಕ್ಷ್ಯಮಾಡುತ್ತಿದ್ದನು.

ಲೋಕದಲ್ಲಿ ಉದ್ದಾಮ ಸ್ವಭಾವದ ಜನರ ಸ್ಥಿತಿಯೇ ಬೇರೆ. ಅವರು "ಕುರುಡ ಹಿಡಿದದ್ದೇ ಒಡಿಗೆ" ಎಂಬ ಗಾದೆಯಂತೆ ತಮ್ಮ ಹಟವನ್ನೊಂದೇ ಸಾಧಿಸುವ ಹವ್ಯಾಸಕ್ಕೆ ಬಿದ್ದು, ತಾವು ಮಾಡುವ ಕೆಲಸದಲ್ಲಿಯ ಗುಣಾವಗುಣಗಳನ್ನು ಯೋಚಿಸರು. ಮುಂದೆ ಬರಬಹುದಾದ ಸುಖ-ದುಃಖಗಳನ್ನು ವಿಮರ್ಶಿಸರು. ಇಂತವರು ಕೊನೆಗೆ ತಾವೂ ಕೆಡುವದಲ್ಲದೆ ತಮ್ಮನ್ನು ನಂಬಿದವರನ್ನೂ ಕೆಡಿಸುವರು. ಪ್ರಕೃತ ಸದಾಶಿವನ ಸ್ಥಿತಿಯೂ ಹೀಗೆಯೇ ಆಗಿತ್ತು.

---

( ೯ )

ರಾತ್ರಿ ೯ ಘಂಟೆಯಾಗಿದ್ದಿತು, ಕಳ್ಳರ ಗುಪ್ತಗೃಹದ ಬಳಿಯಲ್ಲಿ ಚೋರಪಂಚಕರ ಮಾತುಗಳನ್ನು ಆಲೈಸುತ್ತಿದ್ದ ಹೊಲೆಯ ವೇಷಧಾರಿ-ನರಸಿಂಗರಾಯನು ಚೋರರ ಗುಪ್ತಾಲೋಚನೆಗಳನ್ನೆಲ್ಲಾ ಕೇಳಿಕೊಂಡು ತಕ್ಷಣವೇ ಅಲ್ಲಿಂದ ಹೊರಟು ಪೋ ಸುಪರಿಂಡೆಂಟರ ಬಂಗ್ಲೆಗೆ ಬಂದನು. ಸಾಹೇಬರು ಊಟ ಮಾಡಿ ಬಂಗ್ಲೆಯೊಳಗೆ ಕುಳಿತಿದ್ದರು. ನರಸಿಂಗರಾಯನು ನೆಟ್ಟಗೆ ಅವರ ಬಳಿಗೆ ಹೋಗಿ ಕುಳಿತುಕೊಂಡನು. ನರಸಿಂಗರಾಯನ ವೇಷವನ್ನು ನೋಡಿ ಸಾಹೇಬರು ಆಶ್ಚರ್ಯದಿಂದ ಕ್ಷಣಕಾಲ ಸ್ತಬ್ಧರಾಗಿ ಆತನ ಗುರುತು ಸಿಗದೆ ಕೊನೆಗೆ ನರಸಿಂಗರಾಯನೆಂದರಿದು ನಗುತ್ತಾ:—ಏನು? ನರಸಿಂಗರಾಯರೇ, ಇದೇನು ಅವತಾರ! ಮತ್ತೇನು ವಿಶೇಷ?

ನರಸಿಂಗ:—ವಿಶೇಷವೇನೂ ಇಲ್ಲ. ಕಳ್ಳರು ಹೇಗೋ ನಾನು ಬಂದಿರುವುದನ್ನು ತಿಳಿದಿರುವರು. ನಾಳೆ ನಿಮಗೊಂದು ಪತ್ರವು ಬರುವುದು. ಅದರಲ್ಲಿ ನೀವು ನನಗೆ ತಲ್ಪಿಸುವಂತೆ ಬರೆದಿರುತ್ತದೆ; ಆದುದರಿಂದ ನೀವು ಅದನ್ನು ತಲ್ಪಿಸುವ ಗೊಡವೆಗೆ ಹೋಗದೆ ನಿಮ್ಮಲ್ಲಿಯೇ ಇರಿಸಿಕೊಂಡಿರ್ರಿ, ನಾಳೆ ನಿಮ್ಮ ಬಂಗ್ಲೆಯಿಂದ ಯಾವ ಜವಾನನೂ ಹೊರಗೆ ಹೋಗದಂತೆ ಸ್ವಲ್ಪ ಎಚ್ಚರಿಕೆಯಿಂದಿರ್ರಿ! ನಾನು ಈ ದಿನವೇ ಕೃಷ್ಣವಿಲಾಸ ಹೋಟೆಲ್ಲನ್ನು ಬಿಟ್ಟು ಬೇರೆ ಯಾವುದಾದರೂ ಒಂದು ಸ್ಥಳದಲ್ಲಿರುವೆನು.

ಸಾಹೇಬರು (ಆಶ್ಚರ್ಯದಿಂದ):—ಏನು? ನೀವು ಬಂದಿರುವುದನ್ನು ಕಳ್ಳರು ಕಂಡುಹಿಡಿದರೇ? ಅವರು ಹೇಗೆಕಂಡುಹಿಡಿದರು? ಹಾಗೂ ಕಳ್ಳರಾರು?

ನರಸಿಂಗ:—ಹೋಟೆಲಿನಲ್ಲಿ ನಾನು ಸ್ವಲ್ಪ ಅಜಾಗರೂಕತೆಯಿಂದಿದ್ದುದೇ ಇದಕ್ಕೆ ಕಾರಣವು, ಎಂದು ತಾನು ಬಂದಲಾಗಾಯಿತು ಈವರೆಗೆ ನಡೆದ ಎಲ್ಲಾ ವಿವರಿಸಿ ಹೇಳಿದನು.

ಅದನ್ನು ಕೇಳಿ, ಸುಪರಿಂಡೆಂಟ ಸಾಹೇಬರು ಬಹಳ ಸಂತೋಷಪಟ್ಟರು. ನರಸಿಂಗರಾಯನ ಸಾಹಸ ಚಾತುರ್ಯಗಳಿಗಾಗಿ ತಲೆದೂಗಿದರು. ಅವರು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾ:—

ರಾವ! ನಿಮ್ಮ ಚಾತುರ್ಯವೂ, ಸಾಹಸವೂ ಅತ್ಯದ್ಭುತವಾಗಿವೆ. ನಿಮ್ಮ ಸಾಹಸ-ಚಾತುರ್ಯಗಳಿಗಾಗಿ ನಾನು ನಿಮ್ಮನ್ನು ಶತಶಃ ಅಭಿನಂದಿಸುತ್ತೇನೆ. ಈಗಲೇ ಆ ಕಳ್ಳರನ್ನು ದಸ್ತಗೀರು ಮಾಡಿಬಿಟ್ಟರೆ ಏನಾಗುತ್ತದೆ?

ನರಸಿಂಗ:—ಛೆ! ಛೆ! ಹಾಗೆಂದಿಗೂ ಮಾಡಬಾರದು. ಈಗಲೇ ಅವರನ್ನು ಹಿಡಿದುಬಿಟ್ಟರೆ ಅವರು ಕಳುವು ಮಾಡಿದ ರುಜುವಾತೇ ಇಲ್ಲದೆ ಹೋಗಿ ಕೇಸು ಸುಳ್ಳಾಗುವದು. ಈಗ ನಮಗೆ ಮುಖ್ಯ ಬೇಕಾದುದು ಆ ನೋಟಿನ ನಂಬರಿನ ಪುಸ್ತಕ, ಅದೊಂದು ನಮ್ಮ ಹಸ್ತಗತವಾಗುವವರೆಗೂ ಅವರನ್ನು ಹಿಡಿಯದೆ ನಾವು ಸುಮ್ಮನಿರಬೇಕು. ಆ ಪುಸ್ತಕವು ನಾಳೆಯೇ ನಮ್ಮ ಹಸ್ತಗತವಾಗುವದರಲ್ಲಿ ಸಂದೇಹವಿಲ್ಲ. ಆ ಪುಸ್ತಕವು ನಮ್ಮ ಕೈ ಸೇರಿದೊಡನೆಯೇ ಅಂದರೆ ನಾಳೆ-ನಾಡದು ಇಷ್ಟರಲ್ಲಿಯೇ ಆ ನೀಚರನ್ನೆಲ್ಲಾ ದಸ್ತಗೀರು ಮಾಡಿಸುವೆನು. ಈಗ ನೀವು ನನಗೆ ಸಹಾಯ ಮಾತ್ರ ಮಾಡಬೇಕು.

ಸುಪರಿಂಡೆಂಟ:—ಏನು ಹೇಳಿರಿ ಅಗತ್ಯವಾಗಿ ಸಹಾಯ ಮಾಡುವೆನು.

ನರಸಿಂಗ:—ನಿಮ್ಮ ಪೋಲೀಸಿನವರಲ್ಲಿ ಒಬ್ಬ ಚತುರನನ್ನು ನನ್ನ ವಶಕ್ಕೆ

ಕೊಡಬೇಕು. ಹಾಗು ನೀವು ಈಗ ಒಬ್ಬ ಜವಾನನನ್ನು ಕೃಷ್ಣವಿಲಾಸ ಹೋಟೆಲ್ಲಿಗೆ ಕಳುಹಿಸಿ ಆ ಹೋಟೇಲಿನ ಮ್ಯಾನೇಜರನನ್ನು ಉಪಾಯದಿಂದ ಇಲ್ಲಿಗೆ ಕರೆಸಿ ಕಳ್ಳರನ್ನು ಹಿಡಿಯುವವರೆಗೆ ಆತನನ್ನು ನಿಮ್ಮಲ್ಲಿಯೇ ಇರಿಸಿಕೊಳ್ಳಬೇಕು.

ಸುಪರಿಂಡೆಂಟಸಾಹೇಬರು ಕೂಡಲೆ ಒಬ್ಬ ಯುವಕ ಜವಾನನನ್ನು ಕರೆದು ಆತನಿಗೆ:—"ನೀನು ಈ ನರಸಿಂಗರಾಯರು ಹೇಳಿದ ಹಾಗೆ ಕೇಳಿಕೊಂಡು ಇವರ ಜೊತೆಯಲ್ಲಿರು" ಎಂದು ಹೇಳಿ ಮತ್ತೊಬ್ಬನನ್ನು ಕರೆದು:—"ನೀನು ಈಗಲೇ ಕೃಷ್ಣವಿಲಾಸ ಹೋಟೆಲ್ಲಿಗೆ ಹೋಗಿ ಅಲ್ಲಿಯ ಮ್ಯಾನೇಜರನನ್ನು ಗುಪ್ತವಾಗಿ ಕಂಡು ಇಲ್ಲಿಗೆ ಕರೆದುಕೊಂಡು ಬಾ, ಈ ವಿಷಯವನ್ನು ಯಾರಿಗೂ ಹೇಳಬೇಡ" ಎಂದು ಅಪ್ಪಣೆ ಮಾಡಿದರು.

ನರಸಿಂಗರಾಯನು:—ನಾಳೆ ನಿಮ್ಮ ಬಂಗ್ಲೆಯ ಬಳಿ ಕಳ್ಳರು ಕಾದಿರುವರಾದ್ದರಿಂದ ಯಾರನ್ನೂ ಹೊರಕ್ಕೆ ಕಳಿಸಬೇಡಿರಿ. ಸ್ವಲ್ಪ ಎಚ್ಚರಿಕೆಯಿಂದಿರ್ರಿ, ಹೋಟೆಲ್ಲು ಮ್ಯಾನೇಜರನಿಗೆ ನಿಜಸಂಗತಿಯನ್ನು ಹೇಳಿ ಆತನ ಮನಸ್ಸಿಗೆ ಸ್ವಲ್ಪವೂ ಬೇಸರವಾಗದಂತೆ ಎರಡು ದಿನಗಳ ಮಟ್ಟಿಗೆ ನಿಮ್ಮಲ್ಲಿಂದ ಕದಲದ ಹಾಗೆ ನೋಡಿಕೊಳ್ಳಿರಿ ಎಂದು ನುಡಿದು ಜವಾನನನ್ನು ಕರೆದುಕೊಂಡು ನೆಟ್ಟಗೆ ಹೋಟೆಲ್ಲಿಗೆ ಹೋಗಿ ಅಲ್ಲಿದ್ದ ತನ್ನ ಗಂಟು ಮೂಟೆಗಳನ್ನೆಲ್ಲಾ ತೆಗೆದುಕೊಂಡು ಹೋಟೆಲ್ಲಿನವರಿಗೆ ಕೊಡಬೇಕಾದ ದುಡ್ಡನ್ನೆಲ್ಲಾ ಕೊಟ್ಟು ತನ್ನೂರಿಗೆ ಹೋಗುತ್ತೇನೆಂದು ಹೇಳಿ ಹೊರಟು ಹೋದನು.

ಸ್ವಲ್ಪ ಹೊತ್ತಿನಲ್ಲಿ ಒಬ್ಬ ಪೋಲಿಸಿನವನು ಬಂದು ಮ್ಯಾನೇಜರನನ್ನು ಗುಪ್ತವಾಗಿ ಕಂಡು ಆತನ ಕಿವಿಯಲ್ಲಿ ಏನೇನೋ ಹೇಳಿ ಆತನನ್ನು ಕರೆದುಕೊಂಡು ಹೋದನು.

---

## ( ೧೦ )

**ಅಯ್ಯೋ! ನನ್ನನ್ನು ಹೊಡೆದು ಕೊಲ್ಲುತ್ತಾರೆ! ನಾನು ಸತ್ತೆ-ಸತ್ತೆ-ಸತ್ತೆನು!**

ಪ್ರಭಾತದ ಎಂಟು ಗಂಟೆಯ ಸಮಯವು. ಭಗವಾನ್ ದಿನಕರನು ಆಕಾಶ ಪಂಥವನ್ನು ಭರದಿಂದ ಏರತೊಡಗಿದ್ದನು. ಒಕ್ಕಲಿಗರೂ, ಕೆಲಸಗಾರರೂ ತಮ್ಮ ಹೊಲ-ಗದ್ದೆಗಳಲ್ಲಿ ಕೆಲಸದಲ್ಲಿ ನಿರತರಾಗಿದ್ದರು. ಧನಿಕರು ಉಪ್ಪರಿಗೆಯ ಮೇಲೆ ಆರಾಮ ಕುರ್ಚಿಯ ಮೇಲೆ ಒರಗಿ ಸುಖಲೋಲುಪರಾಗಿದ್ದರು. ದನಕರುಗಳು ಮೇವಿಗಾಗಿ ಬಯಲುಗಳಿಗೂ, ಗುಡ್ಡಗಳ ಕಡೆಗೂ ಒತ್ತರದಿಂದ ಸಾಗಿದ್ದವು.

ಇಂತಹ ವೇಳೆಯಲ್ಲಿ ಮೇಲೆ ಬರೆದಂತೆ ಕೂಗಿಕೊಳ್ಳುತ್ತಾ ಒಬ್ಬ ಚಿಂದೀ ಬಟ್ಟೆಯನ್ನು ಧರಿಸಿದ ತರುಣನು ಕಳ್ಳರ ಗುಪ್ತಗೃಹವಾದಾ ಹಾಳು ದೇವಾಲಯಕ್ಕಭಿಮುಖವಾಗಿ ಓಡಿ ಬರುತ್ತಿದ್ದನು. ಆತನ ಹಿಂದೆ ಒಬ್ಬ ದೃಢಾಂಗ ಮನುಷ್ಯನು ಕೈಯಲ್ಲೊಂದು ದೊಡ್ಡ ದೊಣ್ಣೆಯನ್ನೆತ್ತಿಕೊಂಡು ಓಡಿ ಬರುತ್ತಿದ್ದನು. ಇನ್ನೇನು? ತರುಣನು ಕೈಗೆ ಸಿಕ್ಕಿದನೆಂದು ಆ ಮನುಷ್ಯನುತನ್ನ ದೊಣ್ಣೆಯನ್ನು ಎತ್ತಿ ಹೊಡೆಯಬೇಕೆನ್ನುವಷ್ಟರಲ್ಲಿ ಆ ತರುಣನು ಆ ಹಾಳು ದೇವಾಲಯದ ಬಾಗಿಲನ್ನು ಬಲವಾಗಿ ದೂಡಿ ಅಯ್ಯೋ! ಸತ್ತೇ! ಎಂದು ದೇವಾಲಯದ ಬಾಗಿಲೊಳಗೆ ಹೋಗಿ ಬಿದ್ದುಬಿಟ್ಟನು.

ತರುಣನ ಆರ್ತನಾದ! ಹಾಗು ದೇವಾಲಯದ ಬಾಗಿಲು ತೆರೆಯಲ್ಪಟ್ಟ ಶಬ್ದವನ್ನು ಕೇಳಿ ಒಳಗಿದ್ದ ವೀರಪ್ಪನು ಜಾಗ್ರತೆಯಾಗಿ ಹೊರಗೆ ಬಂದು ಬಾಗಿಲ ಬಳಿಯಲ್ಲಿ ಒಬ್ಬ ಮನುಷ್ಯನು ಬಿದ್ದಿರುವುದನ್ನೂ, ಹೊರಗೊಬ್ಬ ಮನುಷ್ಯನು ದೊಣ್ಣೆಯನ್ನೆತ್ತಿಕೊಂಡು ಬರುತ್ತಿರುವುದನ್ನೂ ನೋಡಿ ಆಶ್ಚರ್ಯದಿಂದ ಆ ದೊಣ್ಣೆಯ ಮನುಷ್ಯನನ್ನು ಕುರಿತು ದರ್ಪಯುಕ್ತವಾದ ಮಾತಿನಿಂದ:—ಎಲೈ ಯಾವನು ನೀನು? ಈತನನ್ನು ಹೊಡೆಯುವದಕ್ಕೇಕೆ ಧಾವಿಸುತ್ತಿರುವಿ? ಎಂದು ಕೇಳಿದನು.

ವೀರಪ್ಪನ ಮಾತನ್ನು ಕೇಳಿ ಓಡಿಬರುತ್ತಿದ್ದ ಆ ಮನುಷ್ಯನಿಗೆ ಅನಿವಾರ ಸಿಟ್ಟು ಬಂದಿತು. ಆತನು ಕೋಪದಿಂದ:-ನನ್ನನ್ನು ಕೇಳುವದಕ್ಕೆ ನೀನು ಯಾರು? ಈತನು ನನ್ನಲ್ಲಿ ತಪ್ಪು ಮಾಡಿದ್ದರಿಂದಲೇ ಹೊಡೆಯುವದಕ್ಕೆ ಬಂದಿರುವೆನು, ಎಂದು ನುಡಿಯುತ್ತಾ ದೇವಾಲಯದೊಳಗೆ ನುಗ್ಗ ಹವಣಿಸಲು, ವೀರಪ್ಪನು ಆತನು ದೇವಾಲಯದೊಳಗೆ ನುಗ್ಗದಂತೆ ಬಾಗಿಲಿಗೆ ಅಡ್ಡನಿಂತು:—ಎಲೋ, ಒಳ್ಳೆಯ ಮಾತಿನಿಂದ ಇಲ್ಲಿಂದ ಹೊರಟುಹೋಗು, ಎಂದು ಗದ್ದರಿಸಿದನು.

ದೊಣ್ಣೆಯ ಮನುಷ್ಯನು ಸಿಟ್ಟಿನಿಂದ ವೀರಪ್ಪನನ್ನು ಕಣ್ಣು ಕೆಕ್ಕರಿಸಿ ನೋಡುತ್ತ:-ಛೇಶಕ್! ಈತನನ್ನು ನಾನು ಒಳಗೆ ನುಗ್ಗಿಯೇ ಹೊಡೆಯುತ್ತೇನೆ. ನೀನು ಮಾಡುವದೇನು? ಈತನು ನನ್ನಲ್ಲಿ ಕದ್ದ ರೂಪಾಯಿಗಳನ್ನು ನೀನು ಕೊಡುವಿಯಾ? ಎನ್ನುತ್ತಾ ಮುಂದೆ ಬಂದನು.

ಈತನು ಬೆದರಿಕೆಯ ಮಾತಿಗೆ ಬಗ್ಗುವದಿಲ್ಲವೆಂದು ತಿಳಿದು ವೀರಪ್ಪನು ಒಳಗಿದ್ದ ಸೇವಕನನ್ನು ಕರೆದು, ಎಲೋ ಕಾಳ:-ಈ ನೀಚ ಮನುಷ್ಯನು ಪಾಪ! ಈ ಬಡತರುಣನನ್ನು ಹೊಡೆಯಬೇಕೆಂದು ಅಟ್ಟಿಕೊಂಡು ಬಂದಿರುವನು!. ನ್ಯಾ-

ನೀತನಿಗೆ ಸಮಾಧಾನದ ಮಾತುಗಳನ್ನಾಡಿದರೂ ಈ ನೀಚನು ಕೇಳದೆ ನಮ್ಮ ಈ ಮನೆಯೊಳಗೆ ನುಗ್ಗಿ ಈ ತರುಣನನ್ನು ಹೊಡೆಯುವೆನೆಂದು ಛಲಹಿಡಿದು ಪುಂಡಾಟಿಕೆ ಮಾಡುತ್ತಿರುವನು. ಈತನನ್ನು ಈಗಲೇ ಅರ್ಧಚಂದ್ರ ಪ್ರಯೋಗದಿಂದ ಓಡಿಸು ಎಂದು ಹೇಳಿದನು.

ಕೂಡಲೆ ಕಾಳನು ಒಂದು ದೊಣ್ಣೆಯನ್ನು ತೆಗೆದುಕೊಂಡು ಬಂದನು. ಅವನನ್ನು ನೋಡಿದೊಡನೆಯೇ ಆ ಆಗಂತುಕ ದೊಣ್ಣೆಯ ಮನುಷ್ಯನು ವೀರಪ್ಪನನ್ನೂ, ಕಾಳನನ್ನೂ ಬಾಯಿಗೆ ಬಂದಂತೆ ಬಯ್ಯುತ್ತ ಅಲ್ಲಿಂದ ಕಾಲ್ದೆಗೆದನು. ಆತನ ಹಿಂದೆಯೇ ಕಾಳನೂ ಓಡಿದನು.

ಆ ಮನುಷ್ಯನು ಹೋದ ಬಳಿಕ ವೀರಪ್ಪನು ಬಾಗಿಲ ಬಳಿ ಬಿದ್ದಿದ್ದ ಆ ತರುಣನನ್ನು ಎಬ್ಬಿಸಿ ಆತನನ್ನು ಕುರಿತು:—ಎಲೋ! ನೀನಾರು? ಆ ಮನುಷ್ಯನು ನಿನ್ನನ್ನು ಹೊಡೆಯಲು ಬಂದುದೇಕೆ? ಎಂದು ಕೇಳಿದನು.

ಆ ತರುಣನು:—(ದೀನ ಸ್ವರದಿಂದ) ಸ್ವಾಮಿ! ನಾನೊಬ್ಬ ಭಿಕ್ಷುಕನು ನನಗೆ ಮನೆಮಾರುಗಳಾವವೂ ಇಲ್ಲ. ಭಿಕ್ಷಾಟನೆಗಾಗಿ ಊರೂರು ಅಲೆಯುತ್ತಿರುವೆನು. ಇಂದು ಬೆಳಿಗ್ಗೆ ಆ ಮನುಷ್ಯನ ಮನೆಗೆ ಭಿಕ್ಷೆಗಾಗಿ ಹೋಗಿದ್ದೆನು. ಆತನು ಎಲ್ಲಿಗೋ ಹೋಗಬೇಕೆಂದು ೧೦ ರೂಪಾಯಿಗಳ ನೋಟೊಂದನ್ನು ಹೊರಗೆ ಜಗುಲಿಯ ಮೇಲಿದ್ದ ಕೋಟಿನ ಜೇಬಿನಲ್ಲಿಟ್ಟು ಒಳಕ್ಕೆ ಹೋದನು. ನಾನು ಅದನ್ನು ಮೆಲ್ಲಗೆ ಕದ್ದೆನು. ಹಣವೆಂದರೆ ಹೆಣವೂ ಬಾಯ್ಬಿಡುವದಂತೆ? ಆ ಮನುಷ್ಯನು ಪುನಃ ಒಂದು ನೋಡುವಲ್ಲಿ ತನ್ನಾ ಕೋಟಿನ ಜೇಬಿನಲ್ಲಿ ನೋಟಿಲ್ಲದಿರಲು ಅಲ್ಲಿದ್ದ ನನ್ನನ್ನು ವಿಚಾರಿಸಿದನು. ನಾನರಿಯೆನೆಂದು ಹೇಳಲು ಆತನು ಕೋಪದಿಂದ ನನ್ನನ್ನು ಹೊಡೆಯುವದಕ್ಕಾಗಿ ದೊಣ್ಣೆಯನ್ನು ತೆಗೆದುಕೊಂಡು ಬರಲು ನಾನು ಹೆದರಿ ಅಲ್ಲಿಂದ ಓಡತೊಡಗಿದೆನು. ಆತನು ನನ್ನ ಹಿಂದೆಯೇ ಬಂದನು. ಇಲ್ಲಿ ತಮ್ಮ ಕೃಪೆಯಿಂದ ನನ್ನ ವಿಪತ್ತು ಪರಿಹಾರವಾಯಿತು. ತಮ್ಮ ಆಶ್ರಯವು ದೊರಕದಿದ್ದರೆ ನಾನಿಷ್ಟೊತ್ತಿಗೆ ಸತ್ತು ಹೋಗುತ್ತಿದ್ದೆನು.

ತರುಣನ ಹೇಳಿಕೆಯನ್ನು ಕೇಳಿ, ವೀರಪ್ಪನು ಕ್ರೂರ ಕಳ್ಳನಾದರೂ ಆತನ ಹೃದಯದಲ್ಲಿ ಸ್ವಲ್ಪ ಕನಿಕರ ಉತ್ಪನ್ನವಾಯಿತು. ಆತನು ಪುನಃ—ಎಲೋ, ಇನ್ನು ನೀನೆಲ್ಲಿಗೆ ಹೋಗುವೆ? ನಿನ್ನ ಹೆಸರೇನು?

ತರುಣ:—ದಯಾಳುಗಳೇ, ನನ್ನ ಹೆಸರು ಚೆನ್ನ! ನಾನಿನ್ನೆಲ್ಲಿಗೆ ಹೋಗಲಿ? ಆ ಮನುಷ್ಯನ ದೊಣ್ಣೆಯ ಪೆಟ್ಟಿಗೆ ತುತ್ತಾಗದಂತೆ ತಪ್ಪಿಸಿದ ತಾವೇ ಇನ್ನು

ಮುಂದೆಯೂ ನನ್ನನ್ನು ಕಾಪಾಡಬೇಕು. ನಾನು ಈಗಲೇ ಹೊರಕ್ಕೆ ಹೋದರೆ ಅವನು ನನ್ನನ್ನು ಕೊಲ್ಲದೆ ಇರನು. ಆದ್ದರಿಂದ ತಮ್ಮ ಬಳಿಯಲ್ಲಿ ಈ ದಿನ ಇರುವೆನು ತಾವು ಅಪ್ಪಣೆ ಮಾಡಿದರೆ ಕೊನೆಯುವರೆಗೂ ತಮ್ಮ ಸೇವೆ ಮಾಡಿ ಕೊಂಡಿರುವೆನು. ನನಗೆ ತಾವೇ ಜೀವದಾನ ಕೊಟ್ಟದ್ದರಿಂದ ನನಗೆ ತಾವೇ ಧನಿಯರು, ಎಂದು ಆತನ ಕಾಲ್ಗೆರಗಿದನು.

ತರುಣನ ಈ ವಿನಂತಿಯನ್ನು ಕೇಳಿ, ವೀರಪ್ಪನ ಮನಕರಗಿ:—ಎಲೋ, ನೀನಿಲ್ಲೇ ಇರು, ಎಂದನು.

ತರುಣನು ವೀರಪ್ಪನು ಆಶ್ವಾಸನ ಕೊಟ್ಟುದುಕ್ಕೆ ಸಂತೋಷವನ್ನು ವ್ಯಕ್ತಪಡಿಸಿ ವಿನಯದಿಂದ:—ಸ್ವಾಮಿ, ನಾನಿನ್ನು ತಮ್ಮ ಪಾದದ ಬಳಿಯಲ್ಲಿ ಆಜ್ಞಾಧಾರಕನಾಗಿರುವೆನು. ಇದೋ ಈ ನೋಟನ್ನು ತಮ್ಮ ಬಳಿಯಲ್ಲಿ ಇರಿಸಿ ಕೊಳ್ಳಬೇಕು, ಎಂದು ತಾನು ಕದ್ದುತಂದ ನೋಟನ್ನು ವೀರಪ್ಪನ ಕೈಗೆ ಕೊಟ್ಟನು.

ಅಷ್ಟರಲ್ಲಿ ಕಾಳನು ಬಂದನು. ವೀರಪ್ಪನು ಆತನನ್ನು ಕುರಿತು:—ಕಾಳ, ಈ ತರುಣನು ನಮ್ಮಲ್ಲಿಯೇ ಇರಲಿ. ನಾನು ಸ್ವಲ್ಪ ಹೊರಗೆ ಪೇಟೆಯ ಕಡೆಗೆ ಹೋಗಿ ಬರುತ್ತೇನೆ ನೀನೂ, ಈ ತರುಣನೂ ಇಲ್ಲಿಯೇ ಇರ್ರಿ, ಎಂದು ಹೇಳಿ ಹೊರಟು ಹೋದನು.

ವೀರಪ್ಪನು ಹೊರಟು ಹೋದ ಮೇಲೆ ಕಾಳನು ಆ ತರುಣನ ಸಂಗತಿಯ ನ್ನೆಲ್ಲಾ ವಿಚಾರಿಸಿದನು. ಆತನುಮೊದಲು ವೀರಪ್ಪನಿಗೆ ಹೇಳಿದಂತೆಯೇ ತನ್ನ ಆತ್ಮವೃತ್ತವನ್ನು ಕಾಳನಿಗೂ ಹೇಳಿದನು. ಅದನ್ನೆಲ್ಲಾ ಕೇಳಿ ಕಾಳನು ಕನಿಕರ ಪಟ್ಟು:—ತಮ್ಮಾ ನೀನಿಲ್ಲೇ ಇರು ನಮ್ಮ ಧನಿಯರು ಬಹಳ ಒಳ್ಳೆಯವರು. ಅವರು ಇಷ್ಟಪಟ್ಟರೆ ಒಂದು ಕ್ಷಣದಲ್ಲಿ ಎಂತೆಂತಹ ಘಟನೆಗಳೆಲ್ಲಾ ನಡೆದು ಹೋಗುವವು. ಇಂತಹ ಮಹನೀಯರ ಸೇವಕನಾಗಲು ನೀನೆಷ್ಟು ಸುಕೃತ ಮಾಡಿದ್ದೆಯೋ? ನಿನ್ನ ಪುಣ್ಯಾಪ್ರಭಾವದಿಂದಲೇ ನಮ್ಮ ಯಜಮಾನರ ಆಶ್ರಯವು ನಿನಗೆ ದೊರೆತಿದೆ, ಎಂದು ಹೇಳಿದನು. ಬಳಿಕ ಅವರಿಬ್ಬರೂ ಅಲ್ಲಿಯೇ ಕಟ್ಟೆಯ ಮೇಲೆ ಹರಟೆ ಹೊಡೆಯುತ್ತ ಕುಳಿತುಕೊಂಡರು.

೧೧ ಘಂಟೆಯಾದರೂ ಹೊರಗೆ ಹೋದವರು ಬಾರದಿರುವದನ್ನು ನೋಡಿ ಕಾಳನಿಗೂ ಬೇಸರವಾಯಿತು. ಆತನು ಚನ್ನನನ್ನು ಕುರಿತು:-ತಮ್ಮಾ, ನೀನಿಲ್ಲೇ ಕಾದು ಕುಳಿತಿರು. ನಾನು ಸ್ವಲ್ಪ ಹೊರಗೆ ಹೋಗಿ ಬರುತ್ತೇನೆ. ಸ್ವಲ್ಪ ಎಚ್ಚರಿಕೆಯಿಂದಿರು, ಎಂದು ಹೇಳಿ ಹೊರಟು ಹೋದನು.

# ( ೧೧ )

ಕಾಳನು ಹೊರಟು ಹೋದ ತರುವಾಯ ಚನ್ನನು ಮೆಲ್ಲಗೆ ಎದ್ದು ಆ ದೇವಾಲಯದ ಒಂದು ಪಕ್ಕದಲ್ಲಿದ್ದ ಕೈಸಾಲೆಯ ಬಳಿಗೆ ಹೋದನು.

ಪ್ರಿಯವಾಚಕರೇ, ಆ ದೇವಾಲಯದ ಪರಿಚಯವನ್ನಿಲ್ಲಿ ಸ್ವಲ್ಪ ಹೇಳುವೆವು ದೇವಾಲಯವು ತೀರಾ ಜೀರ್ಣಸ್ಥಿತಿಗೆ ಬಂದಿತ್ತೆಂದು ಹಿಂದೆಯೇ ಹೇಳಿದ್ದೇವಷ್ಟೆ? ದೇವಾಲಯದ ಸುತ್ತಲೂ ಮೊದಲಿಗೆ ಬಲವಾದ ಚಂದ್ರಸಾಲೆ ಇದ್ದು ದೇವರೆದುರಿಗೆ ದೊಡ್ಡ ಹೆಬ್ಬಾಗಿಲಿದ್ದಿತು. ಈಗ ಆ ಕೈಸಾಲೆಯೆಲ್ಲವೂ ಮುರಿದು ಬಿದ್ದು, ಒಂದು ಪಕ್ಕದಲ್ಲಿ ಮಾತ್ರ ಸ್ವಲ್ಪ ಉಳಿದಿದ್ದಿತು. ಉಳಿದ ಭಾಗದಲ್ಲೆಲ್ಲಾ ದೊಡ್ಡ ಮರಗಳೂ, ಬಿದಿರು ಮೆಳೆಗಳೂ ಬೆಳೆದು ಹೋಗಿದ್ದವು. ಈಚೆಗೆ ವೀರಪ್ಪನು ಮುರುಕಳಿಗೆ ಬಂದ ಆ ಕೈಸಾಲೆಯ ಭಾಗವನ್ನು ಹಾಕಿಸಿ, ಹೆಬ್ಬಾಗಿಲನ್ನು ಭದ್ರವಾಗಿ ನಿಲ್ಲಿಸಿದ್ದನು. ದೇವಾಲಯದ ಸುತ್ತಲೂ ಕಾಡುಬೆಳೆದು ಹೋದುದರಿಂದ ಅದು ನಿರ್ಜನ ಪ್ರದೇಶವಾಗಿತ್ತು. ವೀರಪ್ಪನೂ, ಆತನ ಜೊತೆಗಾರರೂ ಅದೇ ಕೈಸಾಲೆಯ ಅವಶಿಷ್ಟ ಭಾಗದಲ್ಲಿ ವಾಸಿಸುತ್ತಿದ್ದರು.

ಆ ಕೈಸಾಲೆಯ ಕೋಣೆಗೆ ಹಾಕಿದ ಕೀಲಿಯನ್ನು ಚನ್ನನು ತನ್ನಲ್ಲಿದ್ದ ಸಾಧನಗಳಿಂದ ತೆರೆದು ಕೋಣೆಯೊಳಕ್ಕೆ ಹೋದನು. ಅಲ್ಲಿ ಆತನು ಕೋಣೆಯನ್ನೆಲ್ಲಾ ಸೂಕ್ಷ್ಮದೃಷ್ಟಿಯಿಂದ ನೋಡುತ್ತಿರಲು, ನೆಲದೊಳಗೆ ಒಂದು ಬಾಗಿಲು ಇದ್ದು ಅದಕ್ಕೆ ಬೀಗವು ಹಾಕಲ್ಪಟ್ಟಿದ್ದಿತು. ಚನ್ನನು ಅದನ್ನು ತೆಗೆದು ಬಾಗಿಲನ್ನು ತೆರೆದು ನೋಡಲು ಅದೊಂದು ಸುರಂಗ ಅಥವಾ ನೆಲದೊಳಗೆ ಇಳಿದು ಹೋಗುವ ಮಾರ್ಗವಾಗಿದ್ದಿತು. ಚನ್ನನು ಅದರ ಬಾಗಿಲನ್ನು ಮೊದಲಿನಂತೆಯೇ ಹಾಕಿ ಕೀಲಿಯನ್ನು ಜಡಿದು ಆ ಕೋಣೆಯ ಗೋಡೆಯಲ್ಲಿದ್ದ ಒಂದು ಕವಾಟಿನ ಬಾಗಿಲನ್ನೆಳೆದನು. ಕಳ್ಳರು ಅದಕ್ಕೆ ಕೀಲಿಯನ್ನು ಹಾಕಿರಲಿಲ್ಲವಾದುದರಿಂದ ಆ ಬಾಗಿಲು ಸರಕ್ಕನೆ ತೆರೆಯಿತು. ಅದರಲ್ಲೂ ಅನೇಕ ಪುಸ್ತಕಗಳಿದ್ದವು. ಚನ್ನನು ಉತ್ಸುಕತೆಯಿಂದ ಅವುಗಳನ್ನೆಲ್ಲಾ ಒಂದೊಂದಾಗಿ ತೆಗೆದು ನೋಡಹತ್ತಿದನು. ಆ ಪುಸ್ತಕಗಳ ಮಧ್ಯದಲ್ಲಿದ್ದ ಒಂದು ಪುಸ್ತಕವನ್ನು ನೋಡಿ ಚನ್ನನ ಮುಖವು ಹರ್ಷದಿಂದ ವಿಕಾಸವಾಯಿತು. ತಾನು ಬಂದ ಕಾರ್ಯವು ಸಾಧಿಸಿತೆಂಬುದು ಆತನ ಮುಖದಲ್ಲುಂಟಾದ ಆನಂದದಿಂದ ವ್ಯಕ್ತವಾಗತೊಡಗಿತು. ಆತನು ಆ ಪುಸ್ತಕವನ್ನೊಂದನ್ನು ತೆಗೆದುಕೊಂಡು ಉಳಿದ ಪುಸ್ತಕಗಳನ್ನೆಲ್ಲಾ ಮೊದಲಿನಂತೆಯೇ ಇರಿಸಿ, ಆ ಕವಾಟಿನ ಬಾಗಿಲನ್ನು ಮೊದಲಿ

ಸಂತೆಯೇ ಹಾಕಿ ಹೊರಗೆ ಬಂದು ಕೋಣೆಯ ಬಾಗಿಲನ್ನಿಕ್ಕಿ ಬೀಗವನ್ನು ಹಾಕಿ ದೇವಾಲಯದಿಂದ ಹೊರಗೆ ಹೋಗಿ ಆ ಪುಸ್ತಕವನ್ನೆಲ್ಲಿಯೋ ಬಚ್ಚಿಟ್ಟು ದೇವಾಲಯಕ್ಕೆ ಬಂದು ಬಾಗಿಲ ಬಳಿ ಕಟ್ಟೆಯ ಮೇಲೆ ತನ್ನ ಸ್ಥಾನದಲ್ಲಿ ಏನೂ ಅರಿಯದವನಂತೆ ಕುಳಿತನು.

ಪ್ರಿಯವಾಚಕರೇ, ಚನ್ನನ ವರ್ತನವನ್ನು ನೋಡಿ ಆತನು ನಿಜವಾದ ಭಿಕ್ಷುಕನಾಗಿರದೆ ಯಾವನೋ ಓರ್ವ ತಂತ್ರಗಾರನಿರುವನೆಂದು ತಿಳಿದು, ನೀವು ಆತನ ಚರಿತ್ರೆಯನ್ನು ತಿಳಿಯಲು ಕುತೂಹಲಪಡುತ್ತಿರಬಹುದಲ್ಲವೇ? ಹೀಗೆ ನಿಮ್ಮನ್ನು, ನರಸಿಂಗರಾಯನ ಹೊರತು ಬೇರೆ ಯಾರೂ ಆಶ್ಚರ್ಯದಲ್ಲಿ ಕೆಡವ ಲಾರರು. ಸುಪರಿಂಟೆಂಡೆಂಟ ಸಾಹೇಬರಲ್ಲಿ ಒಬ್ಬ ಜವಾನನ್ನು ಬೇಡಿ ಕರೆದು ಕೊಂಡು ಹೋದ ನರಸಿಂಗರಾಯನೇ ಚನ್ನನ ವೇಷವಹಾಕಿ ಯುಕ್ತಿಯಿಂದ ದೇವಾಲಯದಲ್ಲಿ ಸೇರಿ ವೀರಪ್ಪನ ಮನಕರಗುವಂತೆ ಮಾತನಾಡಿ ನೋಟುಗಳ ನಂಬರಿನ ಪುಸ್ತಕವನ್ನು ನೆಗವಿ ಹಾಕಿದನು. ಆತನ ಈ ಸಾಹಸಕ್ಕೆ ನೀವು ಏನೆನ್ನುವಿರಿ? ಇರಲಿ.

ಇತ್ತ ಹೊರಗೆ ಹೋದ ಕಾಳನು ಬಂದನು. ಮುಂದೆ ಕೆಲಹೊತ್ತಿನ ಮೇಲೆ ವೀರಪ್ಪನೂ ಬಂದನು. ಆ ಮೂವರೂ ಹರಟೆ ಹೊಡೆಯುತ್ತ ಕುಳಿ ತಿರಲು, ನರಸಿಂಗರಾಯನ ಶೋಧಕ್ಕೆ ಹೋದ ರಘು, ಹಾಗು ರಜಕ ಇವ ರಿಬ್ಬರೂ ಬಂದರು. ತನ್ನ ಯುಕ್ತಿಯು ನಾಟಿತೋ, ಇಲ್ಲವೋ ಎಂಬದನ್ನು ತಿಳಿ ಯುವದಕ್ಕಾಗಿ ಸದಾಶಿವನು ಬಂದನು. ಅವರೆಲ್ಲರಿಗೆ ಚನ್ನನ ಸಂಗತಿಯನ್ನು ತಿಳಿದು ಅವನ ಬಗ್ಗೆ ಕನಿಕರವುಂಟಾಯಿತು.

ಬಳಿಕ ರಜಕನೂ, ರಘುವೂ ತಾವು ಹೋದ ಕಾರ್ಯವೇನೂ ಆಗಲಿ ಲ್ಲೆಂದು ಹೇಳಿದರು. ಹೋಟಲ್ಲಿನ ಮ್ಯಾನೇಜರನು ಒಮ್ಮೆಲೆ ಇಲ್ಲದಂತಾದದ್ದನ್ನು ಕೇಳಿ ವೀರಪ್ಪನಿಗೆ ಹೆದರಿಕೆಯುಂಟಾಯಿತು. ಆಗ—

ಸದಾಶಿವ:—ನಮ್ಮ ವಿಷಯಕ್ಕೂ, ಹೋಟೆಲ್ಲಿನ ಮ್ಯಾನೇಜರನಿಗೂ ಸಂಬಂಧವೇನು? ನಿಮ್ಮ ಸಂದೇಹವು ಇನ್ನೂ ನೀಗದಿದ್ದರೆ ಇನ್ನೊಂದಾವರ್ತಿ ನರಸಿಂಗರಾಯನ ಬಗ್ಗೆ ಪರಿಶೋಧಿಸೋಣ! ನಮ್ಮವರು ಪುನಃ ಬೆಳಗಿನಂತೆಯೇ ಮಧ್ಯಾಹ್ನ ೩ ಘಂಟೆಯ ವರೆಗೆ ನಿಶ್ಚಿತ ಸ್ಥಳದಲ್ಲಿ ಕಾದಿರಲಿ. ಒಂದುವೇಳೆ ನಾನು ಬರೆದ ಆ ಪತ್ರವು ಮಧ್ಯಾಹ್ನ ೨ ಘಂಟೆಯಲ್ಲಿ ಡೆಲಿವರಿಯಾಗಬಹುದು; ಆದುದ ರಿಂದ ಆಗಲಾದರೂ ನರಸಿಂಗರಾಯನ ಸಮಾಚಾರವು ಗೊತ್ತಾಗುತ್ತದೋ? ಇಲ್ಲವೋ? ನೋಡೋಣ?

ಸದಾಶಿವನ ಮಾತಿಗೆ ಎಲ್ಲರೂ ಒಪ್ಪಿದರು. ಸದಾಶಿವನು ಹೊರಟು ಹೋದನು. ಉಳಿದವರು ಆ ದೇವಾಲಯದಲ್ಲಿಯೇ ಭೋಜನ ಮಾಡಿದರು. ಪುನಃ ರಜಕನೂ, ರಘುವೂ ಹೊರಟು ಹೋದರು. ಸ್ವಲ್ಪ ಹೊತ್ತಿನಲ್ಲಿಯೇ ವೀರಪ್ಪನೂ, ಕಾಳನೂ ಯಾವ ಕೆಲಸಕ್ಕೋ ಹೋದರು. ಅಲ್ಲಿ ಚನ್ನನೊಬ್ಬನೇ ಉಳಿದನು.

೪ ಘಂಟೆಯಾದ ಮೇಲೆ ಎಲ್ಲರೂ ಬಂದು ಸೇರಿದರು. ಆಗ ಚೋರ ಕೂಟದವರ ಸಭೆಯಾಯಿತು. ರಜಕನೂ, ರಘುವೂ ಮಧ್ಯಾಹ್ನದ ಮೇಲೆ ಹೋದಾಗ ನರಸಿಂಗರಾಯನ ಸುದ್ದಿಯೇನೂ ತಿಳಿಯಲಿಲ್ಲವೆಂದು ಹೇಳಿದರು. ಚೋರರೆಲ್ಲರೂ ಸೇರಿರುವುದನ್ನು ನೋಡಿ ಚನ್ನನು ಮನಸ್ಸಿನಲ್ಲಿಯೇ ಹಿಗ್ಗಿ, ಅದನ್ನು ಹೊರಗೆ ತೋರಗೊಡದೆ ಒಳ್ಳೇ ವಿನಯದಿಂದ ವೀರಪ್ಪನನ್ನು ಕುರಿತು:- "ಧನಿಯರೇ, ನಾನು ಭಿಕ್ಷುಕನು-ತಿರುಗಾಡಿದವನು. ಈಗ ಒತ್ತಟ್ಟಿಗೇ ಕುಳಿತು ಬೇಸರ ಬಂದಿದೆ. ಪೇಟೆಯ ಕಡೆಗೆ ಹೋಗಿ ಅತ್ತಿತ್ತ ಅಡ್ಡಾಡಿ ಬರುವೆನು. ಅಪ್ಪಣೆ ಕೊಡಬೇಕು, ಎಂದು ಬೇಡಿಕೊಂಡನು.

ವೀರಪ್ಪನಿಗೆ ಚನ್ನನ ವಿನಯಾದಿ ನಡತೆಗಳನ್ನು ನೋಡಿ ಆತನಲ್ಲಿ ಪ್ರೀತಿ ಯುತ್ಪನ್ನವಾಗಿದ್ದಿತು. ಕೇವಲ ೭-೭ ಘಂಟೆಯ ಪರಿಚಯದಿಂದಲೇ ಚನ್ನನು ವೀರಪ್ಪನ ನಂಬಿಗೆಗೆ ಪಾತ್ರನಾಗಿದ್ದನು. ಆದ್ದರಿಂದ ವೀರಪ್ಪನು ಆತನಲ್ಲಿ ಸಂಶಯ ಪಡದೆ ಪ್ರೀತಿಯಿಂದ:—ಹೋಗಿ ಬೇಗ ಬಾ; ಎಚ್ಚರಿಕೆ! ನಮ್ಮ ಈ ಬಿಡಾರದ ಸುದ್ದಿಯನ್ನು ಯಾರಿಗೂ ತಿಳಿಸಬೇಡ! ಎಂದು ಹೇಳಿ ಆತನ ಕೈಯಲ್ಲಿ ಒಂದು ರೂಪಾಯಿಯನ್ನು ಕೊಟ್ಟು ಕಳಿಸಿದನು.

ಚನ್ನನು ಸಂತೋಷದಿಂದ ದೇವಾಲಯದ ಹೊರಗೆ ಬಂದು ತಾನು ಬಚ್ಚಿಟ್ಟ ಪುಸ್ತಕವನ್ನು ತೆಗೆದುಕೊಂಡು ಎಲ್ಲಿಯೋ ಮಾಯವಾದನು.

---

## ( ೧೨ )

ಸೂಪರಿಂಡೆಂಟರು ಬಂಗ್ಲೆಯಲ್ಲಿ ಯಾರನ್ನೋ ನಿರೀಕ್ಷಿಸುತ್ತ ಕುಳಿತಿದ್ದರು. ಅಷ್ಟರಲ್ಲಿ ಒಂದು ವ್ಯಕ್ತಿಯು ಬಂದಿತು. ಆಗ ಸಾಹೇಬರು ಆನಂದದಿಂದ ಬನ್ನಿರಿ ನರಸಿಂಗರಾಯರೇ, ಎಂದು ನುಡಿದು, ಅವರ ಸ್ವಾಗತ ಮಾಡಿದರು. ನರಸಿಂಗರಾಯನು ಬಂದು ಕುಳಿತನು. ಅವರ ಹಿಂದೆಯೇ ಒಬ್ಬ ಪೋಷ್ಟ ಮನ್ನನು ಬಂದು ಒಂದು ಪತ್ರವನ್ನು ತಂದುಕೊಟ್ಟನು. ಸಾಹೇಬರು ಅದನ್ನು ಒಡೆಯಲು ಅದರಲ್ಲಿ ಕೆಳಗೆ ಬರೆದಂತೆ ಸಂಗತಿಯಿದ್ದಿತು.

ನರಸಿಂಗರಾಯನೇ, ನೀನು ನಮ್ಮನ್ನು ಹಿಡಿಯುವದಕ್ಕಾಗಿ ಬಂದಿರುವೆ
ಂದು ಕೇಳುತ್ತೇವೆ. ನೀನು ನಿಜವಾಗಿ ನಮ್ಮ ಪತ್ತೆಗೆ ಬಂದಿರುವ್ರದಾದರೆ
ನೆಂದಿಗೂ ನಮ್ಮನ್ನು ಹಿಡಿಯಲಾರೆ. ನೀನೀಕೆಲಸದಲ್ಲಿ ವಿಜಯಿಯಾಗಲಾರೆ,
ಮ್ಮನೆ ನಮ್ಮನ್ನು ಹಿಡಿಯುವ ಹವ್ಯಾಸಕ್ಕೆ ಬಿದ್ದು ಆಪತ್ತಿಗೊಳಗಾಗುವದ
ಂತ ನಿನ್ನೂರಿಗೆ ಹೋಗಿ ಕ್ಷೇಮದಿಂದಿರುವದು ಒಳ್ಳೆಯದು. ನಮ್ಮ ಹಿತ
ಚನಕ್ಕೆ ನೀನು ಕಿವಿಗೊಡದೆ ನಿನ್ನ ಪ್ರಯತ್ನವನ್ನೇ ಮುಂದರಿಸಿದರೆ ಆಗ
ೋಡು ನಮ್ಮ ಸಾಹಸವನ್ನು! ಹೆಚ್ಚೇಕೆ? ನೀನು ಜೀವದಿಂದ ಹಿಂತಿರುಗಿ
ನ್ನೂರಿಗೆ ಹೋಗಲಾರೆ! ಎಚ್ಚರಿಕೆ? ಇತಿ ಕಳ್ಳರ ಗುಂಪಿನ ಹಿರಿಯ.

ಪತ್ರದ ಸಂಗತಿಯನ್ನು ಕೇಳಿ ನರಸಿಂಗರಾಯನು ನಕ್ಕು ಸಾಹೇಬರಿಗೆ
ಲ್ಲ ಸಂಗತಿಯನ್ನು ಹೇಳಿ ಈಗಲೇ ಆ ದೇವಾಲಯವನ್ನು ಮುತ್ತಿ ಅವರನ್ನು
ಸ್ತಗೀರು ಮಾಡಬೇಕು, ಎಂದು ನುಡಿದು ಅವರಿಗೆ ತಾನು ತಂದಿದ್ದ ಪುಸ್ತ
ವನ್ನು ತೋರಿಸಿದನು. ನರಸಿಂಗರಾಯನ ಈ ಸಾಹಸವನ್ನು ನೋಡಿ ಸಾಹೇ
ರಿಗೆ ತುಂಬಾ ಆಶ್ಚರ್ಯವಾಯಿತು. ಅವರು ನರಸಿಂಗರಾಯನ ಸ್ಥೈರ್ಯ-
ಾಹಸಗಳನ್ನು ಬಹಳವಾಗಿ ಹೊಗಳಿ ಕೂಡಲೆ ಇನ್ಸಪೇಕ್ಟರರನ್ನು ಕರೆಯಿಸಿ
ೇವಾಲಯಕ್ಕೆ ಮುತ್ತಿಗೆಯನ್ನಿಕ್ಕುವ ಸಿದ್ಧತೆ ಮಾಡೆಂದು ಆಜ್ಞಾಪಿಸಿದರು.

† † † † † †

ಸ್ವಲ್ಪ ಹೊತ್ತಿನಲ್ಲಿ ನರಸಿಂಗರಾಯನೂ-ಸಾಹೇಬರೂ ಆ ಹಾಳು ದೇವಾಲ
ಯಕ್ಕೆ ಬಂದರು. ಇನಸ್ಪೇಕ್ಟರರಿಗೆ ದೇವಾಲಯದ ಸುತ್ತಲೂ ಪೋಲೀಸಿನವ
ರನ್ನು ಕಾವಲಿರಿಸ ಹೇಳಿ, ಅವರಿಬ್ಬರೂ ಕೈಯಲ್ಲಿ ಬಾರುಮಾಡಿದ ರಿವಾಲ್ವರುಗ
ಳನ್ನು ಹಿಡಿದುಕೊಂಡು ಮೆಲ್ಲಗೆ ಸದ್ದಾಗದಂತೆ ಹೆಬ್ಬಾಗಿಲವನ್ನು ತೆರೆದು ಒಳಗೆ
ಸಾಲೆಯ ಕಡೆಗೆ ಹೋದರು. ಅಲ್ಲಿ ಕೈಸಾಲೆಯ ಕೋಣೆಯ ಬಾಗಿಲು ಇಕ್ಕ
ಟ್ಟು ಒಳಗಿನಿಂದ ಅಗಳಿಯನ್ನು ಹಾಕಲ್ಪಟ್ಟಿದ್ದಿತು. ಕೋಣೆಯೊಳಗಿನ ನೆಲ
ಮನೆಯಲ್ಲಿ ಕಳ್ಳರ ಗುಪ್ತಾಲೋಚನೆಯು ನಡೆದಿತ್ತು. ನರಸಿಂಗರಾಯನೂ-
. ಸಾಹೇಬರೂ ಕೋಣೆಯ ಬಾಗಿಲಿನಲ್ಲಿ ನಿಂತು ಒಳಗೆ ಕಳ್ಳರಾಡುತ್ತಿದ್ದ
ಾತುಗಳನ್ನು ಆಲಿಸಲಾರಂಭಿಸಿದರು.

ಸದಾಶಿವ:—ನರಸಿಂಗರಾಯನು ಬಂದುದು ಸುಳ್ಳಾಯಿತಷ್ಟೇ? ಇನ್ನೇನು
ಮಗೆ ಭಯ?

ವೀರಪ್ಪ:—ನನಗೇಕೋ ಭಯವಾಗುತ್ತದೆ. ನಮ್ಮ ಕೃತ್ಯವು ಗುಪ್ತ

ವಾಗದೆಂದು ನನ್ನ ಮನಸ್ಸು ಹೇಳುತ್ತಿದೆ.

ಸದಾಶಿವ:—ಮಿತ್ರರೇ, ನೀವೇಕೆ ಈ ರೀತಿಯಾಗಿ ಭಯಪಡುತ್ತಿರುವಿರಿ? ಇಡೀ ದಿವಸವಾದರೂ ನರಸಿಂಗರಾಯನ ಸಮಾಚಾರದ ಒಂದಕ್ಷರವೂ ಗೊತ್ತಾಗದಿರಲು, ಆತನು ಬಂದುದು ಸುಳ್ಳೆಂದು ವ್ಯಕ್ತವಾಗುತ್ತದೆಯಲ್ಲಾ? ನಮ್ಮ ಗುಪ್ತಾಗಾರವನ್ನು ಅದಾವ ಪೋಲೀಸಿನವನು ಪತ್ತೇ ಹಚ್ಚುವನು? ನೀವು ಸುಮ್ಮನೇ ಮನಸ್ಸಿಗೆ ಇಲ್ಲದ ಸಂಶಯವನ್ನು ಹಚ್ಚಿಕೊಂಡು ಭಯಪಡುತ್ತಿರುವಿರಿ. ನರಸಿಂಗರಾಯನು ನಿಜವಾಗಿಯೂ ಬಂದಿದ್ದರೆ, ಆತನ ಸಮಾಚಾರಃ ಇಷ್ಟೊತ್ತಿಗೆ ಚಾ, ಚು, ಆದರೂ ನಮಗೆ ಗೊತ್ತಾಗಬೇಕಷ್ಟೆ? ನೀವೇ ಹೇಳಿ.

ವೀರಪ್ಪ:—ಅದೇನೋ ನಿಜ; ಆದರೆ ಹೋಟೇಲಿನ ಯಜಮಾನನು ನರಸಿಂಗರಾಯನು ಬಂದಿರುವನೆಂದು ಹೇಳಿರುವನಲ್ಲಾ!

ಸದಾಶಿವ:—ಹೋಟೆಲ್ಲಿನ ಮ್ಯಾನೇಜರನು ಆತನು ನರಸಿಂಗರಾಯನೇ ಎಂದು ಖಂಡಿತವಾಗಿ ಹೇಳಿಲ್ಲ. ಆತನ ಹೇಳಿಕೆಯಂತೆ ಅಲ್ಲಿಗೆ ಬಂದವನು ನರಸಿಂಗರಾಯನ ಮಿತ್ರನಾಗಿರಬಹುದು. ನರಸಿಂಗರಾಯನು ಈ ಮಿತ್ರನಿಗೆ ತನ್ನ ನೆನಪಿಗಾಗಿಯೋ, ಬೇರೆ ಯಾವ ಉದ್ದೇಶದಿಂದಲೋ ಆ ಕಾರ್ಡನ್ನು ಕೊಟ್ಟಿರಬಹುದು. ಆತನು ನರಸಿಂಗರಾಯನೇ ನಿಜವಾಗಿದ್ದರೆ ಇಂದು ನಾವು ಮಾಡಿದ ಪ್ರಯತ್ನದಲ್ಲಿ ಸ್ವಲ್ಪವಾದರೂ ಆ ವಿಷಯವು ಗೊತ್ತಾಗುತ್ತಲೇ ಇದ್ದಿತು.

ವೀರಪ್ಪ:—ಮಿತ್ರರೇ, ಅದುದಾಯಿತು. ಇನ್ನು ಮುಂದೇನುಮಾಡೋಣ?

ಸದಾಶಿವ:—ನರಸಿಂಗರಾಯನು ಬಂದಿದ್ದರೆ ನಮಗೆ ಭಯ! ಆದರೆ ಆತನು ಬಂದುದು ಸುಳ್ಳಾದ ಮೇಲೆ ನಮಗೇತರ ಭಯ? ಆದರೂ ನಾವು ಜಾಗರೂಕರಾಗಿರಬೇಕು. ನಾಳೆಯೋ ನಾಡಿದ್ದೋ ರಜಕನು ಹಣವನ್ನು ತೆಗೆದುಕೊಂಡು ಕೃಷ್ಣನಗರಕ್ಕೆ ಹೋಗಿ ನಗದುಮಾಡಿಸಿಕೊಂಡು ಬರಲಿ. ಆ ಬಳಿಕ ಮುಂದಿನ ಏರ್ಪಾಡನ್ನು ಪರ್ಯಾಲೋಚಿಸೋಣ. ಒಂದುವೇಳೆ ಯಾರಾದರೂ ಪತ್ತೆಗೆ ಬಂದರೂ ಅವರಿಗೆ ರುಜುವಾತು ಬೇಕಷ್ಟೇ? ಆ ನಂಬರಿನ ಪುಸ್ತಕವನ್ನು ಸುಟ್ಟು ಹಾಕಿದಿರಷ್ಟೇ?

ವೀರಪ್ಪ:—(ಗಾಬರಿಯಿಂದ) ಹಾ! ಇಲ್ಲ! ಮರೆತೇ ಹೋಯಿತು. ಬೆಳಿಗ್ಗೆ ಸುಡಬೇಕೆಂದು ಮೇಲೆ ತೆಗೆದುಕೊಂಡು ಹೋಗಿ ಕಪಾಟಿನಲ್ಲಿರಿಸಿದ್ದೆನು. ಅಷ್ಟರಲ್ಲಿ ಆ ಭಿಕ್ಷುಕ ತರುಣನ ಗಲಾಟೆಯಾಗಲು ಆ ಗದ್ದಲದಲ್ಲಿ ಅದರ ನೆನಪೇ ಇಲ್ಲದೆ ಹಾಗೆಯೇ ಪೇಟೆಗೆ ಹೋದೆನು. ರಘೂ, ಹೋಗು ಆ ಕಪಾಟಿ

ನಲ್ಲಿದ್ದ ಆ ಪುಸ್ತಕವನ್ನು ತೆಗೆದುಕೊಂಡು ಬಾ, ಇಲ್ಲಿ ಎಲ್ಲರ ಸಮಕ್ಷಮ ಅದನ್ನು ಸುಟ್ಟುಬಿಡೋಣ.

ಸದಾಶಿವ:—ಮಿತ್ರರೇ, ಅದೆಂತಹ ಮರವು. ನಿಮ್ಮ ಮರೆವಿಕೆಯಿಂದ ಇಷ್ಟು ದಿನ ಶ್ರಮಪಟ್ಟುದೂ ಎಲ್ಲಿಯಾದರೂ ವ್ಯರ್ಥವಾಗುವ ಸಂಭವ ಬಂದರೆ ಆಗೇನು ಗತಿ? ನಮ್ಮ ಕಾರಸ್ಥಾನಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಬಯಲಿಗೆ ತರುವುದಕ್ಕೆ ಆ ಪುಸ್ತಕವು ಸಹಾಯಕಾರಿಯಾಗಿದೆ. ಮೊದಲು ಆ ಪುಸ್ತಕವನ್ನು ಸುಡಬೇಕು.

ರಘುವು ಕಪಾಟಿನಲ್ಲಿದ್ದ ಪುಸ್ತಕಗಳನ್ನೆಲ್ಲಾ ಎತ್ತಿ ಮಗುಚಿದನು. ಅದರಲ್ಲಿ ಅದೊಂದು ಪುಸ್ತಕವು ಆತನಿಗೆ ಸಿಕ್ಕಲಿಲ್ಲ. ಆ ಪುಸ್ತಕವು ಅಲ್ಲಿ ಇದ್ದರೆ ತಾನೆ ಆತನಿಗೆ ಸಿಕ್ಕುವುದು? ಆತನು ಗಟ್ಟಿಯಾಗಿ 'ಇಲ್ಲಿ ಆ ಪುಸ್ತಕವಿಲ್ಲ' ಎಂದು ಕೆಳಗಿನವರಿಗೆ ಕೂಗಿ ಹೇಳಿದನು.

ಇವರ ಸಂಭಾಷಣವನ್ನು ಕಿವಿಗೊಟ್ಟು ಕೇಳುತ್ತ ಹೊರಗೆ ನಿಂತಿದ್ದ ನರಸಿಂಗರಾಯನು 'ಆ ಪುಸ್ತಕ ಇಲ್ಲಿದೆ' ಎಂದು ಗಟ್ಟಿಯಾಗಿ ಹೇಳಿ, ಕೋಣೆಯ ಬಾಗಿಲನ್ನು ಬಲವಾಗಿ ಒದ್ದು ಮುರಿದು, ಇಬ್ಬರೂ ಒಳಹೊಕ್ಕರು. ಅವರನ್ನು ನೋಡಿದೊಡನೆಯೇ ರಘುವಿನ ಎದೆಯೊಡೆದು ಆತನು ಭಯದಿಂದ ಕಂಪಿಸುತ್ತಾ ಅಯ್ಯೋ ಸರ್ವನಾಶವಾಯಿತು, ಎಂದು ಕೂಗುತ್ತಾ ನೆಲಮನೆಯೊಳಗೆ ಹಾರಿದನು.

ನರಸಿಂಗರಾಯನು ಒಳಹೊಕ್ಕೊಡನೆಯೇ ಒಂದು ಸಿಳ್ಳು ಹಾಕಲು, ಹೊರಗಿದ್ದ ಪೋಲೀಸಿನವರಲ್ಲಿ ಬಲಿಷ್ಠರಿಬ್ಬರು ಮಾತ್ರ ಬಾಗಿಲಿನಲ್ಲಿ ಖಡ್ಗಧಾರಿಗಳಾಗಿ ನಿಂತರು. ಉಳಿದವರೆಲ್ಲರೂ ಕೈಸಾಲೆಯ ಕಡೆಗೆ ಧಾವಿಸಿ ಬಂದರು.

ಹೊರಗಿದ್ದ ಪೋಲೀಸಿನವರು ಒಳಕ್ಕೆ ನುಗ್ಗಿ ಕಳ್ಳರ ಪೆಟ್ಟನ್ನು ಲಕ್ಷ್ಯ ಮಾಡದೆ ಕಳ್ಳರನ್ನು ಸುತ್ತುಗಟ್ಟಿ ಅವರೆಲ್ಲರ ದೊಣ್ಣೆಗಳನ್ನು ಕಸಿದು ಎಲ್ಲರನ್ನೂ ಹಿಡಿದು ಕೈ-ಕಾಲಿಗೆ ಬೇಡಿಯನ್ನು ತೊಡಿಸಿದರು.

ಆಗ ನರಸಿಂಗರಾಯನು ಮುಂದೆ ಬಂದು ನಗುತ್ತಾ:—ಸದಾಶಿವಯ್ಯನವರೇ, ನಿಮ್ಮ ಚಾತುರ್ಯವೆಲ್ಲಿ ಹೋಯಿತು? ನರಸಿಂಗರಾಯನು ಬಂದುದು ಸುಳ್ಳಷ್ಟೆ? ಈಗ ಗೊತ್ತಾಯಿತೇ? ನರಸಿಂಗರಾಯನೇ ಬಂದು ನಿಮ್ಮೆಲ್ಲರನ್ನೂ ಹಿಡಿದನೆಂಬುದು? ನಾನೇ ನರಸಿಂಗರಾಯನು ತಿಳಿಯಿತೇ? ಎಂದನು.

ನರಸಿಂಗರಾಯನ ಮರ್ಮಭೇದಕ ಮಾತನ್ನು ಕೇಳಿ ಸದಾಶಿವನಿಗೆ ಬಲ್ಲು

ವ್ಯರ್ಥವಾಯಿತು. "ತಾನು ದುಡುಕಿ ಮೋಸಹೋದೆನೆಂದು ಕೊಂಡನು" ಉಳಿದವರಂತೂ ಭಯದಿಂದ ಮುಂದುಗಾಣದೆ ಹೌಹಾರಿ ಕುಳಿತರು.

ಸುಪರಿಂಟೆಂಡೆಂಟರು:—ಇವರೆಲ್ಲರನ್ನೂ ಸ್ಟೇಶನ್ನಿಗೆ ಹಿಡಿದೊಯ್ದು ಲಾಕಪ್ಪಿನಲ್ಲಿಡುವಂತೆ ಸಬ್ ಇನಸ್ಪೇಕ್ಟರನಿಗೆ ಆಜ್ಞೆಮಾಡಿದರು. ಒಡನೆಯೇ ಕೇ. ಪೋಲೀಸಿನವರು ಅವರೈವರನ್ನೂ ಸ್ಟೇಶನ್ನಿಗೆ ಕರೆದೊಯ್ದರು.

ನರಸಿಂಗರಾಯನೂ, ಸುಪರಿಂಟೆಂಡೆಂಟರೂ ಉಳಿದವರೊಡನೆ ಅಲ್ಲಿಯ ಗುಪ್ತ ಗೃಹವನ್ನು ಶೋಧಿಸಿದರು. ಅದರಲ್ಲಿ ವೀರಪ್ಪನು ಮಾಡಿದ ಎಷ್ಟೋ ಕೊಲೆ-ಸುಲಿಗೆಗಳ ಗುರುತುಗಳೂ, ಹಾಗು ಕೆಲವು ಪದಾರ್ಥಗಳೂ ದೊರೆತವು. ಆ ಗುಪ್ತ ಗೃಹದಲ್ಲೊಂದು ಕಬ್ಬಿಣದ ಪೆಟ್ಟಿಗೆಯಿದ್ದಿತು. ಅದರಲ್ಲಿ ಗುರುನಾಥ ರಾಯನ ನೋಟಿನ ಕಟ್ಟಿದ್ದಿತು. ಅವುಗಳನ್ನೆಲ್ಲಾ ತೆಗೆದುಕೊಂಡು ಅವರೆಲ್ಲರೂ ಆ ದೇವಾಲಯದಿಂದ ಹೊರಗೆ ಬಂದು, ಆ ದೇವಾಲಯದ ಹೆಬ್ಬಾಗಿಲಿಗೆ ಬೀಗ ಮೊಹರು ಮಾಡಿ ಅಲ್ಲಿಯೊಬ್ಬ ಪೋಲೀಸಿನವನನ್ನು ಕಾವಲಿರಿಸಿ, ಸ್ಟೇಶನ್ನಿಗೆ ಹೊರಟು ಹೋದರು.

ಸ್ಟೇಶನ್ನಿನಲ್ಲಿ ಸದಾಶಿವನು "ತಾನು ಇಷ್ಟು ದಿನವೂ ಮಾಡಿದ ಶ್ರಮವು ನಿಷ್ಫಲವಾಗಿ ಮೊದಲು ತಾನು ಪ್ರಸಿದ್ಧ ರೀತಿಯಿಂದ ಮಾಡಿದ ಈ ಕೃತ್ಯವು" "ಪ್ರಥಮಗ್ರಾಸೇ ಮಕ್ಷಿಕಾಪಾತಃ" ಎಂಬಂತೆ ಹೊರಬಿದ್ದುದಕ್ಕಾಗಿ ತನ್ನ ದುರ್ದೈವವನ್ನು ಕುರಿತು ತನ್ನ ದುಡುಕುತನದ ಅವಿವೇಕಕ್ಕಾಗಿ ತನ್ನನ್ನು ತಾನೆ ಹಳಿದುಕೊಂಡನು. ವೀರಪ್ಪನು ಸದಾಶಿವನ ಮಾತಿನಂತೆ ತಾನು ನಡೆದು ಕೆ ನೆಂದು ಮನಸದಲ್ಲಿಯೇ ತನ್ನ ಕೃತಕರ್ಮದ ಬಗ್ಗೆ ಸದಾಶಿವನನ್ನು ನಿಂದಿಸು ದ್ದನು. ಉಳಿದ ಮೂವರಂತೂ ತಮ್ಮ ಹಾದೇನಾಗುವದೋ ಎಂದು ಭಯದಿಂದ ಅಳುತ್ತಿದ್ದರು.

ಮರುದಿನವೇ ಸೂಪರಿಂಡೆಂಟಸಾಹೇಬರು ಹೋಟೆಲ್ ಮ್ಯಾನೇಜರನಿಗೆ ಮನೆಗೆ ಹೋಗಲು ಅಪ್ಪಣೆ ಕೊಟ್ಟು ಒಂದು ಕಾರ್ಯಕ್ಕಾಗಿ ತಮ್ಮನ್ನು ಹೀಗೆ ಸ್ವಲ್ಪ ತೊಂದರೆಗೊಳಿಸಿದೆವೆಂದು ಆತನಿಗೆ ತಿಳಿಸಿ ಆತನ ಕ್ಷಮೆಯನ್ನು ಕೇಳಿ ಕೊಂಡರು. ಸಾಹೇಬರೇ, ಕ್ಷಮೆಯನ್ನು ಕೇಳುವಾಗ ಆತನೇನು ಹೇಳುವನು? ಆತನು ಯಾವ ಮಾತನ್ನೂ ಆಡದೆ ತನ್ನ ಮನೆಗೆ ಹೊರಟು ಹೋದನು.

ಆ ದಿನವೇ ಸೂಪರಿಂಡೆಂಟರೂ ನರಸಿಂಗರಾಯನೂ ಕಳ್ಳರೈವರನ್ನೂ ಕೃಷ್ಣನಗರಕ್ಕೆ ಕರೆದೊಯ್ದು ಕೇಸನ್ನು ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ದಾಖಲ ಮಾಡಿಸಿ ಕಳ್ಳರನ್ನು ಜೈಲಿನಲ್ಲಿರಿಸಿದರು.

ಮುಂದೆ ನ್ಯಾಯಾಧೀಶರಲ್ಲಿ ಕಳ್ಳರ ವಿಚಾರಣೆಯಾಗಿ ಕಳ್ಳರಿಗೆ ಯೋಗ್ಯ ಶಿಕ್ಷೆಯಾಯಿತು. ಸರಕಾರದವರು ನರಸಿಂಗರಾಯನಿಗೆ ಬಹುಮಾನವನ್ನು ಮಾಡಿದರು. ಎಲ್ಲೆಲ್ಲಿ ನೋಡಿದರೂ ಪತ್ತೇದಾರ ನರಸಿಂಗರಾಯನ ಗೌರವವು ಆಗತೊಡಗಿತು. ———

**ಸಮಾಪ್ತ.**

## کتب خانہ
## جامعہ عثمانیہ

۱- اراکین مجلس اعلیٰ، مجلس وقار، مجلس انتظامی، مجالس شعبہ جات نصاب پانچ کتابیں ایک مہینہ تک اپنے پاس رکھ سکینگے۔

۲- اساتذہ جامعہ عثمانیہ و کلیہ جات ملحقہ و گزیٹیڈ عہدہ داران جامعہ اور اراکین دار الترجمہ تین کتابیں ایک ماہ تک اپنے پاس رکھ سکینگے۔

۳- طیلسانین جسٹر شدہ دو کتابیں، بی۔ اے۔ اور انٹرمیڈیٹ کے طلبہ تین کتابیں، ایم۔ اے، ال ال بی و تحقیقاتی جماعتوں کے طلبہ پانچ کتابیں دو ہفتہ تک اپنے پاس رکھ سکینگے۔

۴- مدت مقررہ پر کتابیں واپس نہ ہوں تو طلبہ سے بحساب ایک آنہ یومیہ فی کتاب وصول کیا جائیگا۔

۵- بشرط موقع کتابیں مکرر جاری کی جا سکینگی مگر اس غرض کے لئے کتب خانہ میں کتاب کا لانا لازم ہے۔

۶- کتابیں گم یا خراب ہو جائیں تو مستعیر پر ذمہ داری عائد ہوگی۔

۷- کتابوں پر کسی قسم کا نشان سیاہی یا پنسل سے نہ لگایا جائے۔